ಕನ್ನಡನಾಡು ಮತ್ತು ಕನ್ನಡಿಗರ ಪರಂಪರೆ—363

# ಶಾಸನ ಪಿತಾಮಹ
# ಬಿ. ಎಲ್. ರೈಸ್

ಶ್ರೀನಿವಾಸ ಹಾವನೂರ



ಐ ಬಿ ಎಚ್ ಪ್ರಕಾಶನ
ಗಾಂಧಿನಗರ ಬೆಂಗಳೂರು 560 009

SHASANA PITAMAHA B. L. RICE — a life-sketch written in Kannada by Dr. S. K. Havanur. Published by P. N. Kamat, IBH Prakashana, Fifth Main, Gandhinagar, Bangalore-560 009

ಬೆಲೆ ರೂ. 1–50

*



*

ಮುಖಪುಟ, ರೇಖಾಚಿತ್ರಗಳು : ಕಮಲೇಶ್

26, 31, 42, 43ನೆಯ ಪುಟಗಳ ಚಿತ್ರಗಳು ಲೇಖಕರ ಕೃಪೆಯಿಂದ

*

ಮೊದಲನೆಯ ಮುದ್ರಣ : 1978. ಪ್ರಕಾಶಕರು : ಪಿ. ಎನ್. ಕಾಮತ್, ಐಬಿಎಚ್ ಪ್ರಕಾಶನ, ಐದನೆಯ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು 560 009. ಮುದ್ರಕರು : ಎಚ್. ಎಸ್. ಎನ್. ರಾವ್, ಐಬಿಎಚ್ ಪ್ರಕಾಶನ ಪ್ರಿಂಟರಿ, ರಾಮಯ್ಯ ಇಂಡಸ್ಟ್ರಿಯಲ್ ಎಸ್ಟೇಟ್, ಬೆಂಗಳೂರು 560 054

*

Paper used for printing this book was made available by the Government of India at concessional rate.

## ಅತ್ಯಂತ ಮಹತ್ವದ ಸಂಶೋಧನೆ !

ಸಿದ್ದಾಪುರವು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿಯ ಒಂದು ಹಳ್ಳಿ. ಕ್ರಿ. ಶ. 1892 ನೇ ಇಸವಿಯ ಒಂದು ದಿವಸ, ಒಬ್ಬ ಇಂಗ್ಲಿಷ್ ಸಾಹೇಬರೂ ಮೂವರು ಮೈಸೂರಿಗರೂ ಆ ಊರಿನ ಹೊರಗಡೆ ಅಲೆಯುತ್ತಾ ಇದ್ದರು. ಉದ್ದೇಶ, ಅಕ್ಷರಗಳನ್ನು ಕೊರೆದಂಥ ಕಲ್ಲಿನ ಫಲಕಗಳನ್ನು ಅಥವಾ ಚಿಕ್ಕ ಬಂಡೆಗಳನ್ನು ಹುಡುಕುವುದು !

ಇಳಿವಯಸ್ಸಿನ ಈ ಸಾಹೇಬರು ಪ್ರತಿ ತಿಂಗಳಲ್ಲಿ ಹಲವಾರು ದಿನ ಇಂಥ ಕಲ್ಬರೆಹಗಳನ್ನೋ, ತಾಡವೋಲೆ ಗ್ರಂಥಗಳನ್ನೋ ಅರಸಿಕೊಂಡು ಆಗಿನ ಮೈಸೂರು ಸಂಸ್ಥಾನದ ಮೂಲೆಮೂಲೆಗಳಲ್ಲಿ ಸಂಚರಿಸುವ ಪರಿಪಾಠವು ಜನಕ್ಕೆ ರೂಢಿಯಾಗಿಹೋಗಿದ್ದಿತು. ಮೊಳಕಾಲ್ಮೂರು ತಾಲೂಕಿಗೆ ಅವರು ಬಂದದ್ದಾದರೂ ಮೊದಲ ಸಲವೇನಲ್ಲ.

ಅವರು ಅಡ್ಡಾಡುತ್ತಿದ್ದ ಸ್ಥಳದಲ್ಲಿ ಕಲ್ಲುಬಂಡೆಗಳೇನೋ ಬೇಕಾದಷ್ಟು ಇದ್ದುವು. ಆದರೆ ಬರೆಹ ಇದ್ದವುಗಳು ಸಿಗಬೇಕಲ್ಲ? ಸುಸ್ತಾಗಿ ಹೋಗಿದ್ದ ಅವರ ಹಸ್ತಕರು ಹಿಂದಿರುಗಿ ಬೆಂಗಳೂರಿಗೆ ಹೋಗಿಬಿಡೋಣ – ಎಂಬುದಾಗಿ ಮೆಲ್ಲಗೆ ಸೂಚಿಸಿದರು. ತಮ್ಮ ಕಚೇರಿಯಿಂದ ತಂದಿದ್ದ ಹಣವೂ ತೀರಿದ್ದಿತು. ಆದರೆ ಸಾಹೇಬರಿಗೊ ಬರಿಗೈಯಿಂದ ಹಿಂದಿರುಗುವ ಮನಸ್ಸಿಲ್ಲ; ಹತ್ತಿರದ ಬಳ್ಳಾರಿಯ ಸಂಚಾರಕ್ಕೆಂದು

ಇಟ್ಟುಕೊಂಡಿದ್ದ ಹಣವನ್ನೆ ಬಳಸಿಕೊಂಡು, ತಮ್ಮ ವಾಸ್ತವ್ಯವನ್ನು ಎರಡು ದಿನ ಮುಂದುವರಿಸಿದ್ದರು.

ಕಲ್ಬರೆಹವನ್ನು ಅರಸುತ್ತ ಅರಸುತ್ತ ನೆರೆಯೂರಾದ ಬ್ರಹ್ಮಗಿರಿಯ ಹತ್ತಿರಕ್ಕೆ ಬಂದರು. ಅನತಿದೂರದಲ್ಲಿ ಬಂಡೆಯೊಂದು ಕಂಡಿತು. ಇತರ ಬಂಡೆಗಳಂತೆ ಸದ್ದುಮುದ್ದಾಗಿ ಇರದೇ, ಅದರ ಮೇಲ್ಭಾಗವು ಸಪಾಟಾಗಿದ್ದಿತು. ಇಂಥ ವಿಷಯದಲ್ಲಿ ಅಪಾರ ಅನುಭವ ಹೊಂದಿದ್ದ ಸಾಹೇಬರಿಗೆ, ತಮಗೆ ಬೇಕಾದದ್ದು ಅಲ್ಲಿ ಇರಬೇಕೆಂದೇ ತೋಚಿತು. ಹರೆಯದ ಉತ್ಸಾಹದಿಂದ ಸಾಗಿಬಂದರು. ಹತ್ತಿರ ಹೋಗಿ



ನೋಡಿದರೆ – ಕನ್ನಡದ್ದಲ್ಲದ, ಸಂಸ್ಕೃತವೂ ಆಗಿರದ, ವಿಚಿತ್ರ ಲಿಪಿಯಲ್ಲಿ ಕೊರೆದ, ಅತ್ಯಂತ ಮುದ್ದಾದ ಅಕ್ಷರಗಳು ! ಕುಣಿದಾಡುವಷ್ಟು ಅವರಿಗೆ ಸಂತೋಷವಾಯಿತು. ಕೂಡಲೇ ಅದಕ್ಕೆ ಕರಿಮಸಿಯನ್ನು ಬಳಿದು, ಒದ್ದೆ ಕಾಗದವನ್ನು ಒತ್ತಿ, ಆ ಅಕ್ಷರಗಳನ್ನು ಮೂಡಿಸಿಕೊಂಡರು. ಅದೇ ಬಗೆಯ ಅಕ್ಷರಗಳುಳ್ಳ ಇನ್ನೆರಡು ಶಿಲಾಲಿಪಿಗಳು ಸಿದ್ದಾಪುರದ ಆಸುಪಾಸಿನಲ್ಲಿ ಸಿಕ್ಕಿದುವು. ಅವುಗಳ ಪ್ರತಿಕೃತಿಯನ್ನೂ ತೆಗೆದುಕೊಂಡು ಬೆಂಗಳೂರಿಗೆ ಬಂದರು.

'ಮದ್ರಾಸ್ ಮೇಲ್' ಎಂಬ ಇಂಗ್ಲಿಷ್ ಪತ್ರಿಕೆಯು ಮದ್ರಾಸಿನಿಂದ ಹೊರಡುತ್ತಿದ್ದಿತು. ಅದರ ಸಂಪಾದಕರು ಈ ನಮ್ಮ ಸಾಹೇಬರ ಪರಿಚಯದವರು. ತಾವು ಶೋಧ ಮಾಡಿದ ಶಿಲಾಲಿಪಿಗಳ ಸಾರವನ್ನು ತಿಳಿಸಿದಾಗ ಆ ಸಂಪಾದಕನು ತನ್ನ ಪತ್ರಿಕೆಯಲ್ಲಿ ಅದನ್ನು ವರದಿಮಾಡಿದ; ಅಷ್ಟೇ ಅಲ್ಲ, ದೂರದ ಲಂಡನ್ನಿನ ವಾರ್ತಾಸಂಸ್ಥೆಗೆ ಅದನ್ನು ತಂತಿಯ ಮೂಲಕ ನಿವೇದಿಸಿದನು. ಅವರು ಕೂಡ ಆ ಶೋಧದ ಮಹತ್ವವನ್ನರಿತು ಆ ಸುದ್ದಿಯನ್ನು ವಿದೇಶೀ ಪತ್ರಿಕೆಗಳಲ್ಲಿ ಮರುಪ್ರಸಾರ ಮಾಡಿದರು.

ಭಾರತ ಮತ್ತು ಇತರ ಏಷಿಯದ ರಾಷ್ಟ್ರಗಳ ಪುರಾತನ ಸಂಸ್ಕೃತಿಯ ಶೋಧನೆಗೆ ಮೀಸಲಾದ 'ರಾಯಲ್ ಏಷಿಯಾಟಿಕ್ ಸೊಸೈಟಿ' ಎಂಬ ಸಂಸ್ಥೆಯು 18ನೇ ಶತಮಾನದಷ್ಟು ಹಿಂದೆ ಆರಂಭವಾಗಿದ್ದಿತು. ಅದರ ಅಧ್ಯಕ್ಷರು ತಮ್ಮ 1892ರ ವಾರ್ಷಿಕ ಸಭೆಯ ಭಾಷಣದಲ್ಲಿ, "ಮೈಸೂರಿನ ಮೊಳಕಾಲ್ಮೂರು ತಾಲೂಕಿನಲ್ಲಿ ಕಂಡುಬಂದ ಶಿಲಾಲಿಪಿಗಳ ಶೋಧವು ಈ ವರ್ಷದ ಅತ್ಯಂತ ಮಹತ್ವದ ಸಂಶೋಧನೆಯಾಗಿದೆ" ಎಂದು ಸಾರಿದರು.

ಇಷ್ಟೊಂದು ಪ್ರಸಿದ್ಧಿಯನ್ನು ಪಡೆದ ಶಿಲಾಲೇಖಗಳ ವಿಷಯವಾದರೂ ಏನಿದ್ದಿತೆಂದು ತಿಳಿಯಲು ನಿಮಗೆ ಕುತೂಹಲವಾಗಿರಬೇಕು. ಅವು ಅಶೋಕ ಮಹಾರಾಜನ ಧರ್ಮಶಾಸನಗಳಾಗಿದ್ದುವು. ಕಳಿಂಗ ಯುದ್ಧದ ಹಿಂಸಾಕಾಂಡದ ಅನಂತರ ಅಶೋಕನು ಬೌದ್ಧ ಧರ್ಮವನ್ನು ಸ್ವೀಕರಿಸಿ, ತನ್ನ ನೂತನ ಧರ್ಮದ ಸಂದೇಶವನ್ನು 'ಭಿಕ್ಷು' ಗಳ ಹಾಗೂ ಶಾಸನಗಳ ಮೂಲಕ ಪ್ರಚುರಪಡಿಸಿದ್ದುದು ಹಿಂದುಸ್ತಾನದ ಇತಿಹಾಸವನ್ನೋದಿದವರಿಗೆಲ್ಲ ಗೊತ್ತು. ಅಶೋಕನ ಇಂಥ ಕಿರುಶಾಸನಗಳು ಕಾಠಿಯಾವಾಡದ ಗಿರಿನಾರದವರೆಗೂ ಕಂಡುಬಂದಿದ್ದುವು. ಈಗ ಒಮ್ಮಿಂದೊಮ್ಮೆಲೈ ಮೈಸೂರ



ಬ್ರಹ್ಮಗಿರಿಯಲ್ಲಿಯ ಅಶೋಕನ ಕಲ್ಲುಬಂಡೆ ಶಾಸನ

ಸಂಸ್ಥಾನದಲ್ಲಿ ಉದ್ಭೂತವಾಗಿಬಿಟ್ಟುವಲ್ಲ! ಅಶೋಕನ ರಾಜಧಾನಿಯಾದ ಪಾಟಲೀಪುತ್ರವೆಲ್ಲಿ? ಈ ಬ್ರಹ್ಮಗಿರಿ, ಸಿದ್ಧಾಪುರಗಳೆಲ್ಲಿ? ನೆನಪಿಡಿ — ಅಶೋಕನು ರಾಜ್ಯಭಾರ ಮಾಡಿದ ಕಾಲ ಕ್ರಿಸ್ತಶಕ ಪೂರ್ವ 3ನೇ ಶತಮಾನ! ಅಷ್ಟು ಹಿಂದಿನ ಕಾಲದಲ್ಲಿ ಅವನ ಕಾರ್ಯಕ್ಷೇತ್ರವು ಬಹು ದೂರ ದಕ್ಷಿಣದವರೆಗೂ ವ್ಯಾಪಿಸಿತ್ತೆಂಬುದನ್ನು ಈ ಶೋಧವು ತೋರಿಸಿಕೊಟ್ಟಿತು. ಅಲ್ಲದೆ ಅದು ಕರ್ನಾಟಕದ ಚರಿತ್ರೆಯಲ್ಲಿ ಕಗ್ಗತ್ತಲೆಯ ಕಾಲ. ಈ ಶೋಧದಿಂದಾಗಿ ಧಿಗ್ಗನೆ ಬೆಳಕೊಂದು ಮೂಡಿದಂತಾಯಿತು. “ಮೌರ್ಯರ ಸಾಮ್ರಾಜ್ಯವು ದಕ್ಷಿಣದಲ್ಲಿ ಮೈಸೂರಿನ ವರೆಗೂ ಹಬ್ಬಿದ್ದಿತು” ಎಂಬ ಮಾತನ್ನು ಇತಿಹಾಸದ ಪುಸ್ತಕಗಳಲ್ಲಿ ನಾವು ಸಲೀಸಾಗಿ ಓದಿ ಬಿಡುತ್ತೇವೆ. ಆ ಮಾತು ಸಿದ್ಧಗೊಂಡದ್ದು ಮೇಲಿನ ಶೋಧದಿಂದ.

ಅದರ ಶ್ರೇಯಸ್ಸು ಬಿ.ಎಲ್. ರೈಸ್ ಅವರಿಗೆ ಸಲ್ಲಬೇಕು. ಈ ಶೋಧಕ್ಕೆ ಕೆಲವು ಕಾಲದ ಹಿಂದೆ, ಬೆಂಗಳೂರಿನ ಬಳಿಯಲ್ಲಿ ರೋಮನ್ ನಾಣ್ಯಗಳನ್ನು ಅವರೇ ಪತ್ತೆಹಚ್ಚಿದ್ದರು. ಅವು ಸುಮಾರು 1900 ವರ್ಷಗಳಷ್ಟು ಹಿಂದಿನವು. ಅದರಿಂದ, ಕ್ರಿಸ್ತಶತಾಬ್ದಿಯ ಕಾಲಕ್ಕೆ ರೋಮನ್ನರಿಗೂ ಕನ್ನಡಿಗರಿಗೂ ವ್ಯಾಪಾರೀ ಸಂಬಂಧವಿದ್ದಿತೆಂಬುದು ಸ್ಪಷ್ಟ ತಾನೇ. ಈ ರೀತಿಯಾಗಿ ಪುರಾತನ ಮಾಹಿತಿಯನ್ನು ಕಂಡುಹಿಡಿದು ನಮಗೆ ಒದಗಿಸಿಕೊಟ್ಟವರಲ್ಲಿ ರೈಸರು ಅಗ್ರಗಣ್ಯರು. ಮೈಸೂರ ಸಂಸ್ಥಾನದಲ್ಲಿಯ ಸುಮಾರು ಒಂಬತ್ತು ಸಾವಿರ ಶಾಸನಗಳನ್ನು ಅವರು ಕಂಡುಹಿಡಿದಿದ್ದು, ಅವುಗಳ ಮೂಲಕ ಅನೇಕಾನೇಕ ಐತಿಹಾಸಿಕ ಸಂಗತಿಗಳನ್ನು ಬೆಳಕಿಗೆ



ಬೆಂಗಳೂರಿನ ಎಚ್. ಎ. ಎಲ್. ಬಳಿ ದೊರೆತ ಆಗಸ್ಟಸ್ ಮತ್ತು ಟೈಬೀರಿಯಸ್‌ರವರ ಬೆಳ್ಳಿ ನಾಣ್ಯಗಳು [ಚಿತ್ರಕೃಪೆ : ಕಮಲೇಶ್

ತಂದಿದ್ದಾರೆ; ನಮ್ಮ ಪ್ರಾಚೀನ ವೈಭವವನ್ನು ನಿಚ್ಚಳವಾಗಿ ತೋರಿಸಿಕೊಟ್ಟಿದ್ದಾರೆ.

ಆದರೆ ಸಾಮಾನ್ಯ ಕನ್ನಡಿಗನು ಈ ಶಾಸನಗಳ ಬೆಲೆಯನ್ನು ಅರಿತಿದ್ದಾನೆಯೆ? ಕರ್ನಾಟಕದ ಕುಲಪುರೋಹಿತ ಆಲೂರ ವೆಂಕಟರಾಯರು ತಮ್ಮ ಸುಪ್ರಸಿದ್ಧ ಗ್ರಂಥವಾದ 'ಕರ್ನಾಟಕ ಗತವೈಭವ'ದಲ್ಲಿ ಶಿಲಾಶಾಸನಗಳ ದುಸ್ಥಿತಿಯನ್ನು ಹೀಗೆ ವರ್ಣಿಸಿದ್ದಾರೆ :

"ಕರ್ನಾಟಕದಲ್ಲಿ ದೊರೆಯುವಷ್ಟು ಶಿಲಾಲಿಪಿಗಳು ಬೇರೆ ಯಾವ ಕಡೆಗೂ ದೊರೆಯುವುದಿಲ್ಲ. ಇಲ್ಲಿ ಕಲ್ಲುಗುಡಿ

ಯಿಲ್ಲದ ಊರಿಲ್ಲ. ಶಿಲಾಲಿಪಿಯಿಲ್ಲದ ಗುಡಿಯಿಲ್ಲ. ನಮ್ಮ ಅರಸರ ಔದಾರ್ಯವನ್ನೂ ದಾನಶೌಂಡತ್ವವನ್ನೂ ಹೊಗಳದ ಶಿಲಾಲಿಪಿಯಿಲ್ಲ. ನಮ್ಮ ಸುದೈವದಿಂದ ಮೈಸೂರ ಸರಕಾರದವರು ಮೂಲೆಕೊಂಪೆಗಳನ್ನು ಸಹ ಹುಡುಕಿಸಿ, ಸಾವಿರಾರು ಶಿಲಾಲಿಪಿ ಮತ್ತು ತಾಮ್ರ ಶಾಸನಗಳನ್ನು ಅಚ್ಚು ಹಾಕಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿಯೂ ಕನಿಷ್ಠ ಏಳೆಂಟು ಸಾವಿರ ಶಿಲಾಲೇಖಗಳು ಸಿಕ್ಕಬಹುದು. ಧಾರವಾಡ ಜಿಲ್ಲೆಯಲ್ಲಿರುವ ಒಟ್ಟು 100–110 ದೊಡ್ಡ ಗ್ರಾಮಗಳೊಳಗೆ ನಾಲ್ಕೆಂಟು ಮಾತ್ರವೇ ಬಿಟ್ಟು ಉಳಿದ ಎಲ್ಲ ಗ್ರಾಮಗಳಲ್ಲಿ ಶಿಲಾಲಿಪಿಗಳು ದೊರೆಯುತ್ತವೆ. ಲಕ್ಕುಂಡಿ, ಅಣ್ಣೀಗೇರಿ ಮುಂತಾದ ಗ್ರಾಮಗಳಲ್ಲಂತೂ 20–30 ಶಿಲಾಲಿಪಿಗಳು ಒಂದೊಂದೇ ಊರಿನಲ್ಲಿ ದೊರೆಯುತ್ತವೆ. ಎಂದೂ ಸವೆಯದಂಥ ಮೂಲಧನವು ನಮ್ಮಲ್ಲಿರಲು ಆದರ ದುಸ್ಥಿತಿ ಏನಾಗಿರುವದು ನೋಡಿದಿರೊ? .... ಕೆಲವರು ಅವುಗಳ ಮೇಲೆ ಎಣ್ಣೆ ಸುರಿದಿದ್ದಾರೆ. ಮತ್ತೆ ಕೆಲವರು ಬಣ್ಣ ಬಳಿದಿದ್ದಾರೆ. ಬೇರೆ ಕೆಲವು ಹುಡುಗರು ತಮ್ಮ ಸ್ವಭಾವಾನುಗುಣವಾಗಿ ಮನಬಂದಂತೆ ಕೆಡಿಸಿದ್ದಾರೆ. ಅವುಗಳ ಮಹತ್ವವನ್ನರಿತವರಾದ ಎಲಿಯೆಟ್, ಫ್ಲೀಟ್, ರೈಸ್ – ಇವರಂಥ ಯುರೋಪಿಯ ಬಂಧುಗಳು ಮಾತ್ರ ಸಾವಿರಾರು ಶಾಸನಗಳನ್ನು ಶ್ರಮಪಟ್ಟು ಉದ್ಧರಿಸಿದ್ದಾರೆ. ತೀರಿತು! ಮಿಕ್ಕವುಗಳೆಲ್ಲ ಹಾಗೇ ಮಣ್ಣು ಮುಕ್ಕುತ್ತ ಬಿದ್ದುಕೊಂಡಿವೆ..... ಅನೇಕ ಶಿಲಾಲಿಪಿಗಳು ತಿಪ್ಪೆಯಲ್ಲಿ ಹೊರಳಾಡುವುದನ್ನೂ ಬಾವಿಗಳಿಗೆ ಪಾವಟಗೆಗಳಾಗಿ ಬಿದ್ದಿರುವುದನ್ನೂ ಗುಡಿಗುಂಡಾರಗಳಿಗೆ ತೊಲೆ ಜಂತಿಗಳಾಗಿರುವುದನ್ನೂ ಕಣ್ಣಾರೆ ಕಂಡಿದ್ದೇನೆ."

ಸುಮಾರು 60 ವರ್ಷಗಳ ಹಿಂದೆ ಹೇಳಿದ ಮಾತುಗಳಿವು.

ರೈಸರ ಕಾರ್ಯವನ್ನು ಮುಂದುವರಿಸಿ, ಸರಕಾರವು ವಿದ್ವಾಂಸರ ಮೂಲಕ ಇನ್ನೂ ಹಲವು ಸಾವಿರ ಶಾಸನಗಳನ್ನು ಹೊರಪಡಿಸಿದೆ. ಭಾರತದ ಎಲ್ಲ ಕಡೆಗೂ ಇಂಥ ಕೆಲಸ ನಡೆದಿದೆ. ಆದರೇನು, ಕಳೆದ 150 ವರ್ಷಗಳಿಂದ ಈ ಕಾರ್ಯವು ನಡೆದು ಬಂದಿದ್ದರೂ ನೂರಾರು ಜನ ವಿದ್ವಾಂಸರು ಶ್ರಮಿಸಿದ್ದರೂ ನಮ್ಮ ರೈಸರು ಶಾಸನಗಳನ್ನು ಹುಡುಕಿ ತೆಗೆದಷ್ಟು, ಇನ್ನಾರೂ ಇವತ್ತಿಗೂ ಮಾಡಿಲ್ಲ. ಅವರು ನಿಜವಾಗಿಯೂ ಶಾಸನ ಪಿತಾಮಹರು. ಕರ್ನಾಟಕದ ಚರಿತ್ರೆಯ ಹಾಗೂ ಸಾಂಸ್ಕೃತಿಕ ಪರಂಪರೆಯ ಅಭ್ಯಾಸಕ್ಕೆ ಭದ್ರವಾದ ಅಡಿಪಾಯವನ್ನು ಹಾಕಿಕೊಟ್ಟಿದ್ದಾರೆ. ಅಲ್ಲದೆ, ಕನ್ನಡಕ್ಕೆ ಇನ್ನಿತರ ರೀತಿಯಿಂದಲೂ ಸೇವೆ ಸಲ್ಲಿಸಿದ್ದಾರೆ. ಅವರ ಬಾಲ್ಯ, ಶಿಕ್ಷಣ ಹಾಗೂ ಕೈಕೊಂಡ ಕಾರ್ಯಗಳೇನೆಂಬುದನ್ನು ನೋಡೋಣ.

## ಹುಟ್ಟಿದ್ದು ಬೆಳೆದದ್ದು ಕನ್ನಡನಾಡಿನಲ್ಲೆ

ಇಂಗ್ಲೆಂಡ್, ಜರ್ಮನಿ, ಸ್ವಿಜರ್ಲೆಂಡ್ ಮುಂತಾದ ದೇಶಗಳಿಂದ ನಮ್ಮಲ್ಲಿಗೆ ಬಂದು ಕೆಲಸಮಾಡಿದ ವಿದೇಶೀಯರ ಸಾಲಿನಲ್ಲಿ ರೈಸರನ್ನೂ ಸೇರಿಸುವುದು ವಾಡಿಕೆಯಾಗಿದೆ. ಆದರೆ ರೈಸರಿಗೆ ಇದು ನಿಮಿತ್ತ ಮಾತ್ರಕ್ಕೆ ಅನ್ವಯಿಸೀತು. ಏಕೆಂದರೆ ಅವರು ಮಾಡಿದ ಪ್ರತಿಯೊಂದು ಕಾರ್ಯವೂ ಕನ್ನಡನಾಡಿಗೆ, ಕನ್ನಡಕ್ಕೆ ಮೀಸಲಾಗಿದ್ದಿತು. ಅದಕ್ಕಿಂತ ಮುಖ್ಯವಾಗಿ ಅವರು ಹುಟ್ಟಿದ್ದು, ಬೆಳೆದದ್ದು ನಮ್ಮ ಬೆಂಗಳೂರಲ್ಲಿಯೇ!

ಅವರ ತಂದೆ ಬೆಂಜಮಿನ್ ಹೋಲ್ಟ್ ರೈಸ್ ಒಬ್ಬ ಪಾದ್ರಿಯಾಗಿದ್ದರು. ಯುರೋಪಿಯನ್ ಮಿಶನರಿ ಜನರು

ಒಬ್ಬೊಬ್ಬರಾಗಿ ಬರುತ್ತಿದ್ದ ಕಾಲವದು. ಎಂದರೆ ಅವರ ಸಂಖ್ಯೆಯು ಮೈಸೂರು ಸಂಸ್ಥಾನದಲ್ಲಿ ಬೆರಳೆಣಿಕೆಯಲ್ಲಿದ್ದಿತು. ಅವರಲ್ಲಿ ಮೊದಲಿಗನೆಂದರೆ ಜಾನ್ ಹ್ಯಾಂಡ್ಸ್. ಕ್ರಿ. ಶ. 1810ನೇ ವರ್ಷ ಬಳ್ಳಾರಿಗೆ ಮಿಶನರಿಯಾಗಿ ಬಂದು, ಸುಮಾರು 20 ವರ್ಷ ಕೆಲಸಮಾಡಿ ಮರಳಿ ಇಂಗ್ಲೆಂಡಿಗೆ ಹೋಗಿದ್ದನು. ಅವನ ಭಾಷಣವೊಂದನ್ನು ಕೇಳಿ (1836),



ಬೆಂಜಮಿನ್ನರಿಗೆ ತಾವೂ ಮಿಶನರಿಯಾಗಿ ಕರ್ನಾಟಕಕ್ಕೆ ಹೋಗಬೇಕೆಂದು ಮನಸ್ಸಾಯಿತು. ಇನ್ನೂ ತರುಣ ವಯಸ್ಸು. ಆದೇ ತಾನೇ ಮದುವೆ ಮಾಡಿಕೊಂಡಿದ್ದರು. ಏನಿದ್ದರೂ ಆ ವರ್ಷವೆ ಪತ್ನಿ ಸಹಿತ ಭಾರತಕ್ಕೆಂದು ಹೊರಟುಬಿಟ್ಟರು. ನಾಲ್ಕು ತಿಂಗಳ ಹಡಗು ಪ್ರವಾಸದಲ್ಲಿದ್ದಾಗಲೇ ಕನ್ನಡ ಕಲಿಯುವ ಚಪಲ! ಹ್ಯಾಂಡ್ಸನಿಂದ ಕೇಳಿ ಬರೆದುಕೊಂಡಷ್ಟೆ ಕನ್ನಡ ಶಬ್ದಗಳನ್ನೂ ವಾಕ್ಯಗಳನ್ನೂ ಗಂಡಹೆಂಡಿರು ಉರುಹಾಕಿದರು. ಅಂತೂ ಮದ್ರಾಸು ಮಾರ್ಗವಾಗಿ ಬಂದು, ಜನವರಿ 1837ರಲ್ಲಿ ಬೆಂಗಳೂರನ್ನು ತಲುಪಿದರು.

ಇವರು ಕೆಲಸ ಮಾಡಬೇಕಾಗಿದ್ದ ಸಂಸ್ಥೆಯ ಹೆಸರು "ಲಂಡನ್ ಮಿಶನ್". ಇದು ಪ್ರೊಟೆಸ್ಟಂಟ್ ಮತದವರ ಸಂಸ್ಥೆ. ಕೆಥೊಲಿಕ್ ಕ್ರಿಸ್ತೀಯರು ನಮ್ಮ ನಾಡಿನಲ್ಲಿ ಆಗ ತುಂಬ ಜನರಿದ್ದರು. ಪ್ರೊಟೆಸ್ಟಂಟ್ ಮತದವರ ಪ್ರಸಾರವು ಬೆಂಗಳೂರಲ್ಲಿ ಈಚೆಗೆ 1820 ರಿಂದ ಆರಂಭವಾಗಿದ್ದಿತು. ಆದ್ದರಿಂದ ಬೆಂಜಮಿನ್ನರಿಗೆ ತಮ್ಮ ಕೆಲಸದಲ್ಲಿ ಯಾವ ಸಿದ್ಧ ಅನುಕೂಲತೆಗಳೂ ಇರಲಿಲ್ಲ.

ಬೆಂಜಮಿನ್ನರು ತಮ್ಮ ಗರ್ಭಿಣಿ ಪತ್ನಿಯೊಡನೆ ಬೆಂಗಳೂರು ನಗರದ ಹೊರಗೆ ವಾಸಿಸತೊಡಗಿದರು (ಈಗಿನ ಸೇಂಟ್ ಮಾರ್ಕ್ಸ್ ಸ್ಕ್ವೇರ್‌ನಲ್ಲಿ). ಅಲ್ಲಿ ಇದ್ದ ಸೈನಿಕರಿಗೆ 'ರವಿವಾರದ ಪ್ರವಚನ' ಮಾಡುತ್ತಿದ್ದರು. ಕನ್ನಡ ತಮಿಳುಗಳನ್ನು ಹೆಚ್ಚಾಗಿ ರೂಢಿಸಿಕೊಂಡರು. "ಕ್ರೈಸ್ತ ಮತಪ್ರಸಾರ ಸುಲಭವಾಗಬೇಕಾದರೆ ಇಂಗ್ಲಿಷ್ ಶಾಲೆಗಳನ್ನು ತೆರೆಯಬೇಕು" ಎಂದು ಆಗಿನ ಮಿಶನರಿಗಳು ಭಾವಿಸಿದ್ದರು. ಆ ಪ್ರಕಾರ ಬೆಂಜಮಿನ್ನರು ಇಂಗ್ಲಿಷ್ ಶಾಲೆಗಳನ್ನು ಆರಂಭಿಸಿ

ದರು. ಆದರೆ ಪಠ್ಯಪುಸ್ತಕಗಳೊಂದೂ ಇರಲಿಲ್ಲ! ಸರಿ, ಅವನ್ನೂ ಬರೆದರು.

ಬೆಂಜಮಿನ್ ರೈಸರು ಸಂತೆ, ಜಾತ್ರೆಗಳು ನೆರೆದಲ್ಲಿ ಹೋಗಿ ಭಾಷಣ ಮಾಡುತ್ತಿದ್ದರು. ತಿದ್ದಿ ತೀಡಿದಂಥ ಕನ್ನಡದಲ್ಲಿ ಅವರು ದಾಸರ ಹಾಡುಗಳ ಧಾಟಿಯಲ್ಲಿ ಕೆಲವು ಕೀರ್ತನೆಗಳನ್ನೂ ರಚಿಸಿದರು. ಮತಾಂತರ ಕಾರ್ಯಕ್ಕಾಗಿ ಬೆಂಗಳೂರನ್ನು ಬಿಟ್ಟು ಬೇರೆ ಊರುಗಳಿಗೂ ಹೋಗಬೇಕಾಗುತ್ತಿತ್ತು. ಹೆಚ್ಚು ಜನರನ್ನು ಮತಾಂತರಗೊಳಿಸಲಾಗದಿದ್ದರೂ ಜನರ ಆದರ, ವಿಶ್ವಾಸಗಳನ್ನು ಬಲುಬೇಗ ಗಳಿಸಿದರು. ಅವರು ಸ್ವಾಭಾವಿಕವಾಗಿ ಚುರುಕು ಬುದ್ಧಿಯವರೂ, ಮಾತಿನಲ್ಲಿ ಚತುರರೂ, ಕೈಗೊಂಡ ಕೆಲಸವನ್ನು ಶ್ರದ್ಧೆಯಿಂದ ಮಾಡಿ ಮುಗಿಸುವವರೂ ಆಗಿದ್ದರು. ಅವರ ಹೆಂಡತಿಯೂ ಕನ್ನಡವನ್ನು ಚೆನ್ನಾಗಿ ಕಲಿತಿದ್ದಳಲ್ಲದೆ, ಬಡ ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆಯನ್ನು ನೋಡಿಕೊಳ್ಳುತ್ತಿದ್ದಳು; ಅವರ ಪುಕ್ಕಟೆ ಊಟ–ವಸತಿಯ ಹೊಣೆಯನ್ನು ಹೊತ್ತಿದ್ದಳು. ಗಂಡನ ಇತರ ಕೆಲಸಗಳಲ್ಲಿಯೂ ನೆರವಾಗುತ್ತಿದ್ದಳು.

ಇಂಥ ತಂದೆ ತಾಯಿಗಳ ಹಿರಿಯ ಮಗನಾಗಿ ನಮ್ಮ ಚರಿತ್ರನಾಯಕನು 17 ಜುಲೈ 1837 ರಂದು ಬೆಂಗಳೂರಲ್ಲಿ ಜನಿಸಿದನು. ಮಗುವಿಗೆ ಲೂಯಿ ಎಂದು ನಾಮಕರಣ ಮಾಡಲಾಯಿತು. ಅವನಿಗೆ ಎರಡು ವರ್ಷ ಆದಾಗ ತಂಗಿಯೊಬ್ಬಳು ಹುಟ್ಟಿದಳು. ವಿಪರೀತ ದುಡಿಮೆಯಿಂದಾಗಿ ತಂದೆ ಬೆಂಜಮಿನ್ನರಿಗೆ ಜಡ್ಡಾಯಿತು. ಹವಾಬದಲಾವಣೆಯಾದರೆ ನೆಟ್ಟಗೆಂದು ಅನಿಸಿ, ಅವರೆಲ್ಲ ಮೈಸೂರು ನಗರಕ್ಕೆ ಹೋಗಿ, ಒಂದೆರಡು ತಿಂಗಳು ವಾಸವಾಗಿದ್ದರು. ಆದರೂ ಆರೋಗ್ಯ ಸುಧಾರಿಸಲಿಲ್ಲವಾದ್ದರಿಂದ, ಉದಕಮಂಡಲಕ್ಕೆ ಹೊರಟು

ನಿಂತರು (ಜೂನ್ 1840). ಮಲೆನಾಡಿನ ಊರುಗಳಲ್ಲಿ ಮಲೇರಿಯಾ ಬೇನೆ ತಾಂಡವವಾಡುತ್ತಿದ್ದ ದಿನಗಳವು. ದಾರಿಯಲ್ಲಿ ಜೋರಾಗಿ ಮಳೆ ಬೀಳುತ್ತಿದ್ದುದರಿಂದ, ತಿಪ್ಪೇಕಾಡು ಎಂಬಲ್ಲಿ ತಂಗಬೇಕಾಯಿತು. ಚಳಿಜ್ವರಕ್ಕೆ ಇನ್ನಷ್ಟು ಕುಪ್ರಸಿದ್ಧವಾಗಿದ್ದ ಸ್ಥಳವದು. "ಇಲ್ಲಿ ಎರಡು ದಿನವಿದ್ದರೂ ಚಳಿಜ್ವರವು ನಿಮ್ಮನ್ನು ಆಹುತಿ ತಗೊಳ್ಳಬಹುದು" ಎಂದು ಕೆಲವು ಜನ ಹೇಳಿದ್ದರಿಂದ ಇವರು ಗಾಬರಿಗೊಂಡರು. ಆದರೆ ಬೇರೆ ಉಪಾಯವಿರಲಿಲ್ಲ. "ದೇವರೇ, ಲೂಯಿ ಹಾಗೂ ಈ ಪುಟ್ಟ ಮಗುವನ್ನು ರಕ್ಷಿಸುವ ಭಾರ ನಿನ್ನದೇ" ಎಂದು ಅನನ್ಯ ಭಾವದಿಂದ ಆಗ ಪ್ರಾರ್ಥಿಸಿದರಂತೆ. ಕೊನೆಗೊಮ್ಮೆ ಉದಕಮಂಡಲವನ್ನು ತಲುಪಿ ಅಲ್ಲಿ ಹಲವಾರು ತಿಂಗಳು ವಾಸವಾಗಿದ್ದು ಬೆಂಗಳೂರಿಗೆ ಹಿಂತಿರುಗಿದರು. ಲೂಯಿಗೆ ತಿಳಿವಳಿಕೆ ಮೂಡತೊಡಗಿದಂದಿನಿಂದ, ಮನೆಯಲ್ಲಿ ಕನ್ನಡದ ಸೊಲ್ಲು ಕೇಳಬರುತ್ತಿತ್ತು. ಆ ಭಾಷೆಯಲ್ಲಿಯೇ ಆಗಾಗ ಧಾರ್ಮಿಕ ಚರ್ಚೆ, ಗ್ರಂಥ ರಚನೆ ಮುಂತಾದವು ನಡೆಯುತ್ತಿದ್ದವು. ಲೂಯಿಯ ಎಳೆಯ ಮನಸ್ಸಿನ ಮೇಲೆ ಕನ್ನಡದ ಪ್ರಭಾವವಾದದ್ದರಲ್ಲಿ ಏನಾಶ್ಚರ್ಯ!

## ವಿದ್ಯಾಭ್ಯಾಸ ಇಂಗ್ಲೆಂಡಿನಲ್ಲಿ; ಜೀವನದ ದುಡಿತವೆಲ್ಲ ಕನ್ನಡದ ನೆಲದಲ್ಲಿ

ಲೂಯಿ ತನ್ನ ಪ್ರಾಥಮಿಕ ಶಿಕ್ಷಣವನ್ನು ಬೆಂಗಳೂರಿನ ಯಾವ ಶಾಲೆಯಲ್ಲಿ ಕಲಿತನೆಂಬುದು ತಿಳಿಯದು. ಅದು ಮುಗಿದೊಡನೆ ಮಾತ್ರ, ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು, 1848 ರಲ್ಲಿ ಇಂಗ್ಲೆಂಡಿಗೆ ಹೋದನು. ಹೀಗೆ ರೈಸ್ ನಮ್ಮ ನಾಡಿನಲ್ಲಿ

ಹುಟ್ಟಿದ್ದುದು ಮಾತ್ರವಲ್ಲದೆ ತನ್ನ 11ನೇ ವಯಸ್ಸಿನ ವರೆಗೂ ಕನ್ನಡದ ಪರಿಸರದಲ್ಲಿಯೇ ಬೆಳೆದನೆಂಬುದು ಮಹತ್ವದ್ದಾಗಿದೆ. ಬಿ. ಎ. ವರೆಗೆ ಶಿಕ್ಷಣವನ್ನು ಪಡೆದ ಮೇಲೆ, ಇಂಗ್ಲೆಂಡಿನಲ್ಲಿಯೇ ಕೆಲವು ಕಾಲ ಉದ್ಯೋಗದಲ್ಲಿದ್ದನೆಂದು ಹೇಳುತ್ತಾರೆ. ಆದರೆ ತಂದೆಯಂತೆ ಮಿಶನರಿ ಕಾರ್ಯಕ್ಕೆ ಅವನು ಮನಸ್ಸುಗೊಡಲಿಲ್ಲವೆಂಬುದು ನಿಜ.

ಇತ್ತ ಬೆಂಗಳೂರಲ್ಲಿ 1858ರಂದು ಸೆಂಟ್ರಲ್ ಹೈಸ್ಕೂಲ್ ಎಂಬುದು ಆರಂಭವಾಗಿದ್ದಿತು. (ಇದೇ ಮುಂದೆ ಸೆಂಟ್ರಲ್ ಕಾಲೇಜ್ ಆಗಿ ಪರಿವರ್ತನೆ ಹೊಂದಿತು.) ಅದಕ್ಕೊಬ್ಬ ಯೋಗ್ಯ ಪ್ರಿನ್ಸಿಪಾಲ್ ಬೇಕಾಗಿದ್ದಿತು. ಆ ವೇಳೆಗೆ ಪಾದ್ರಿ ರೈಸ್ ಬೆಂಗಳೂರಲ್ಲಿ ಸಾಕಷ್ಟು ಪ್ರಸಿದ್ಧರಾಗಿದ್ದರು. ಅವರ ಹಿರಿಯ ಮಗ ಲೂಯಿಯವರನ್ನು, ಅವರು ದೊಡ್ಡವ ರಾಗುವವರೆಗೆ ನೋಡಿದವರಿದ್ದರು. ಆಗಿನ ಕಾಲಕ್ಕೆ ಶಿಕ್ಷಣ ಕ್ಷೇತ್ರದಲ್ಲಿಯೆ ಕೆಲಸ ಮಾಡಬಲ್ಲಂಥ ಬ್ರಿಟಿಷ್ ಅಧಿಕಾರಿಗಳು ಸಿಗುವದು ದುಸ್ತರವಾಗಿದ್ದಿತು. ಬೆಂಜಮಿನ್ನರ ಮಗನಿಗೇ ಈ ಪ್ರಿನ್ಸಿಪಾಲ್ ಹುದ್ದೆಯನ್ನು ಕೊಡಬಹುದೆಂದು ಅದಾ ರಿಗೊ ಹೊಳೆದಿರಬೇಕು. ಹಾಗೆ ಸಹಜವಾಗಿ ಹೊರಬಂದ ಈ ಸೂಚನೆ ಕನ್ನಡಿಗರಿಗೆ ಪುಣ್ಯಪ್ರದವಾಯಿತು. ಕ್ರಿ. ಶ. 1860ರಲ್ಲಿ ಲೂಯಿ ರೈಸ್ ಬೆಂಗಳೂರಿಗೆ ಬಂದು ತಂದೆ ತಾಯಿಗಳನ್ನು ಕೂಡಿಕೊಂಡರು. ಹೈಸ್ಕೂಲಿನ ಅಧಿಕಾರ ವಹಿಸಿಕೊಂಡರು.

ಮೋಜೆಂದರೆ ಅವರು ಮರುವರ್ಷ ತಾವಾಗಿ ಕನ್ನಡ ಹೈಯರ್ ಸೆಕಂಡರಿ ಪರೀಕ್ಷೆಗೆ ಕುಳಿತು ಪಾಸಾದುದು. ನಾಲ್ಕು ವರ್ಷಗಳ ಅನಂತರ ಇದೇ ರೀತಿಯಾಗಿ ಹಿಂದುಸ್ತಾನೀ ಪರೀಕ್ಷೆ

ಯಲ್ಲಿಯೂ ತೇರ್ಗಡೆ ಹೊಂದಿದರಂತೆ. ಆದರಂತೆ ಸಂಸ್ಕೃತ ವನ್ನು ಮನಮುಟ್ಟಿ ಕಲಿತರು. ವಿವಿಧ ಭಾಷೆಗಳ ಪರಿಜ್ಞಾನ ಅವರಿಗೆ ಆವಶ್ಯವೆಂದು ತೋರಿದ್ದಿತು.

ಐದು ವರ್ಷ ಕೆಲಸ ಮಾಡಿದ ಮೇಲೆ ಅವರನ್ನು ಮೈಸೂರು–ಕೊಡಗುಗಳ ಶಾಲಾ ಇನ್‌ಸ್ಪೆಕ್ಟರ್ ಎಂದು ನೇಮಿಸಲಾಯಿತು. ಅದರ ಪರಿಣಾಮವಾಗಿ ಅವರು ಸಮಗ್ರ ಮೈಸೂರು ಸಂಸ್ಥಾನದ, ಆದರಂತೆ ಕೊಡಗಿನ ವಿವಿಧ ಊರು ಗಳಲ್ಲಿ ಸಂಚರಿಸುವದಕ್ಕೆ ಅವಕಾಶ ಒದಗಿಬಂತು. ಈ ಸಂಚಾರ ಕಾಲದಲ್ಲಿಯೇ ಶಿಲಾಶಾಸನಗಳು, ಕನ್ನಡ ಸಂಸ್ಕೃತ ಭಾಷೆ ಗಳಲ್ಲಿಯ ಹಸ್ತಪ್ರತಿಗಳು ಹಾಗೂ ಇತರ ಪುರಾತನ ವಸ್ತುಗಳು ಅವರ ಕಣ್ಣಿಗೆ ಬಿದ್ದುವು ಮತ್ತು ಅವನ್ನು ಸಂಗ್ರ ಹಿಸಬೇಕೆಂಬ ವಿಚಾರ ಗಟ್ಟಿಯಾಗಿ ನೆಲೆಗೊಂಡಿತು.

ಮೂರು ವರ್ಷ ಈ ಕೆಲಸ ಮಾಡಿಯಾದ ಮೇಲೆ ಅವರಿಗೆ ಬಡತಿ ಸಿಕ್ಕಿತು. ರೈಸ್ ಇಡೀ ಸಂಸ್ಥಾನದ ಶಿಕ್ಷಣಾಧಿ ಕಾರಿ (ಡೈರೆಕ್ಟರ್) ಎಂದು ನೇಮಕಗೊಂಡರು. ಅಧಿಕಾರ ವಹಿಸಿದ ಅನಿತರಲ್ಲಿಯೇ ಅವರು ಶಿಕ್ಷಣ ಕ್ಷೇತ್ರದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದರು. ಮುಖ್ಯವಾಗಿ ಪ್ರತಿ ಹೋಬ ಳಿಯಲ್ಲೂ ಒಂದಾದರೂ ಶಾಲೆ ಇರಲೇಬೇಕೆಂಬ ದೃಢ ನಿರ್ಧಾರದಿಂದ ಅವರು ಮುಂದುವರಿದರು. ದಿವಾನ್ ವಿಶ್ವೇಶ್ವ ರಯ್ಯನವರ ಕಾಲದಲ್ಲಿ ಮೈಸೂರ ಸಂಸ್ಥಾನದ ವಿದ್ಯಾ ಪ್ರಗತಿಯು ಎದ್ದು ಕಾಣುವಂತೆ ಇತ್ತಲ್ಲವೆ, ಅದರ ತಳಹದಿ ಯನ್ನು ಹಾಕಿದವರು ರೈಸರೇ.

ಲೂಯಿ ರೈಸ್ ಇಂಗ್ಲೆಂಡನ್ನು ಬಿಟ್ಟುಬಂದು ಹದಿನೆಂಟು ವರ್ಷಗಳಾಗಿದ್ದುವು. ಆಗಿನ ಬ್ರಿಟಿಷ್ ಅಧಿಕಾರಿಗಳು ವರ್ಷ ಕ್ಕೊಮ್ಮೆ ರಜೆಪಡೆದು ಸ್ವದೇಶಕ್ಕೆ ಹೋಗಿ ಬರುತ್ತಿದ್ದಿಲ್ಲ.

ಹಲವು ವರ್ಷಗಳು ಕಳೆದ ಮೇಲೆ 5-6 ತಿಂಗಳು ರಜೆಯ ಮೇಲೆ ಹೋಗುತ್ತಿದ್ದರು. ಅದರಂತೆ ರೈಸರು 1868ರಲ್ಲಿ ಇಂಗ್ಲೆಂಡಿಗೆ ಹೋದರು. ಅಲ್ಲಿಯೇ ಮದುವೆಯಾದರು. ಮದುವೆಯು ತಂದೆತಾಯಿಗಳಿಲ್ಲದೆ ಜರುಗಬೇಕಾಯ್ತು. ಏಕೆಂದರೆ ತಂದೆಗೆ ಬೆಂಗಳೂರ ಮಿಶನ್ನಿನಲ್ಲಿ ಕೈತುಂಬ ಕೆಲಸ. ತಾಯಿಯು ಅದಕ್ಕೆ ಕೆಲವು ವರ್ಷಗಳ ಹಿಂದೆ (1864) ತೀರಿಕೊಂಡಿದ್ದಳು. ರೈಸರು ಮರಳಿ ಬಂದ ಮೇಲೆ ಶಿಕ್ಷಣಾಧಿಕಾರಿಯಾಗಿಯೇ ಮುಂದುವರಿದರು. ಮುಂದೆ 1874ರಲ್ಲಿ ಸರಕಾರದ ವಿದ್ಯಾಖಾತೆಯ ಕಾರ್ಯದರ್ಶಿ ಎಂಬುದಾಗಿ ಬಡತಿಯಾಯಿತು. ಶಿಕ್ಷಣ ಕ್ಷೇತ್ರದಲ್ಲಿ ಇದು ಅತ್ಯಂತ ಹಿರಿಯ ಹುದ್ದೆಯಾಗಿದ್ದಿತು.

## ಕಾರ್ಯಸಮರ್ಥರ ಮೇಲೆಯೇ ಹೆಚ್ಚು ಹೊರೆ

ಆಗಿನ ಕೇಂದ್ರ ಸರಕಾರದಲ್ಲಿ ಡಬ್ಲ್ಯೂ. ಡಬ್ಲ್ಯೂ. ಹಂಟರ್ ಎಂಬವನು ಶಿಕ್ಷಣ ಖಾತೆಯನ್ನು ನೋಡಿಕೊಳ್ಳುತ್ತಿದ್ದನು. ಅವನು ಕಾರ್ಯಾರ್ಥಿಯಾಗಿ ಬೆಂಗಳೂರಿಗೆ ಬಂದಿದ್ದಾಗ ರೈಸರು ಸಂಸ್ಥಾನದ ಶಿಕ್ಷಣ ಸೂತ್ರಗಳನ್ನು ನಿರ್ವಹಿಸುತ್ತಿದ್ದ ಬಗೆಯನ್ನು ನೋಡಿ ಬೆರಗಾದನು. ಎರಡು ವರ್ಷ ಬಿಟ್ಟು ಮತ್ತೊಮ್ಮೆ ಆತ ಬಂದಾಗ, ಅವರ ಪರಿಚಯ ಇನ್ನಷ್ಟು ಬೆಳೆಯಿತು. ಮುಂದೆ ಇಡೀ ಹಿಂದುಸ್ತಾನದಲ್ಲಿ ಶೈಕ್ಷಣಿಕ ಸುಧಾರಣೆಯನ್ನು ಮಾಡುವ ದೃಷ್ಟಿಯಿಂದ ಹಂಟರನ ನೇತೃತ್ವದಲ್ಲಿ ಒಂದು ಕಮೀಶನ್ನಿನ ನೇಮಕವಾಯಿತು. ದೂರದ ಕಲ್ಕತ್ತೆಯಲ್ಲಿದ್ದ ಅವನಿಗೆ, ಈ ಕಮೀಶನ್ನಿನ ಕಾರ್ಯದರ್ಶಿಯೆಂದು ನಮ್ಮ ರೈಸರೇ ಬೇಕಾಯಿತು! ರೈಸರು 1882ರಲ್ಲಿ

ಆ ಜವಾಬುದಾರಿಯುನ್ನು ಹೊತ್ತುಕೊಂಡು, ಅಮೂಲ್ಯ ವಾದ ವರದಿಯುನ್ನು ಒಪ್ಪಿಸಿದರು.

ಯಾರಾದರೂ ಕಾರ್ಯಸಮರ್ಥರು ಕಂಡರೆ, ಅವರ ಮೇಲೆ ಹೆಚ್ಚೆಚ್ಚು ಕೆಲಸದ ಹೊರೆ ಬೀಳುವುದು ಎಲ್ಲೆಡೆಗೆ ಕಂಡುಬರುವುದು. ಹತ್ತು ವರ್ಷಕ್ಕೊಮ್ಮೆ ಜನಗಣಿತಿಯುನ್ನು ನಡೆಸುವ ಪರಿಪಾಠ ಇದೆಯಷ್ಟೆ (1951, 1961, 1971,ಇ). 1881 ರಲ್ಲಿ ಮೈಸೂರ ಸಂಸ್ಥಾನದ ಜನಗಣಿತಿಗೆ ರೈಸರನ್ನೇ ಮುಖ್ಯಾಧಿಕಾರಿ ಎಂದು ನೇಮಿಸಲಾಯಿತು. ಅದರ ಅಂಕಿ-ಸಂಖ್ಯೆಗಳನ್ನು ವ್ಯವಸ್ಥಿತ ರೀತಿಯಲ್ಲಿ ವಿಶ್ಲೇಷಿಸಿ ವರದಿಗಳನ್ನು ಹೊರತಂದರು (1884). ರೈಸರಿಗೆ ಪೋಲೀಸ್ ಖಾತೆಯ ಕಾರ್ಯದರ್ಶಿತ್ವವನ್ನು ಕೆಲಕಾಲ ಒಪ್ಪಿಸಲಾಗಿದ್ದಿತೆಂದರೆ ಏನು ಹೇಳುವಿರಿ ? ಯಾವ ಕೆಲಸ ಕೊಟ್ಟರೂ ರೈಸರು ಸಮರ್ಥ ರೀತಿಯಲ್ಲಿ ಹಾಗೂ ಚೊಕ್ಕಟವಾಗಿ ನಿರ್ವಹಿಸುತ್ತಿದ್ದರೆಂಬುದೇ ಇದರ ಕಾರಣವಾಗಿದ್ದಿತು. ಅವರ ಈ ಕಾರ್ಯದಕ್ಷತೆಯುನ್ನು ಕಂಡು, ಬ್ರಿಟಿಷ್ ಸರಕಾರವು ಅವರಿಗೆ "ಸಿ.ಐ.ಇ." (Companion of the Order of the Indian Empire) ಎಂಬ ಪದವಿಯುನ್ನು ನೀಡಿತು.

ಈ ಪದವಿಯು ದೊರೆತ 1884ನೇ ವರ್ಷವು, ಇತರ ಕಾರಣಗಳಿಂದಲೂ ಅವರ ಜೀವನದ ಮಹತ್ವದ ವರ್ಷಗಳಲ್ಲಿ ಒಂದೆನಿಸಿದೆ. ಹಳಗನ್ನಡ ಗ್ರಂಥಗಳನ್ನು ಸಂಪಾದಿಸಿ, ಪ್ರಕಟಿಸುವ ಕಾರ್ಯ ಆರಂಭವಾದದ್ದು ಇದೇ ವರ್ಷದಿಂದ. ಜೊತೆಗೆ ಮೈಸೂರು ಸರಕಾರವು ಪುರಾತತ್ವ ಇಲಾಖೆಯುನ್ನು ಅಸ್ತಿತ್ವದಲ್ಲಿ ತಂದ ವರ್ಷವದು. ಇಲಾಖೆಯ ಕೆಲಸವೆಂದರೆ, ಪುರಾತನ ವಸ್ತುಗಳನ್ನು, ಹಳೆಯ ಅವಶೇಷಗಳನ್ನು ಕಂಡು ಹಿಡಿಯುವುದು ; ಅವುಗಳನ್ನು ಪ್ರಕಟಿಸುವುದು ; ರಕ್ಷಿಸು

ಸುವುದು–ಇವೇ ಮುಂತಾದುವು. ಇವನ್ನು ಅಧಿಕೃತವಾಗಿ ಕೈಗೊಳ್ಳಲಾಯಿತು. ಈ ಕಾರ್ಯವು ಆಗಿನ ಭಾರತದ ಬೇರೆ ಯಾವುದೇ ರಾಜ್ಯ ಅಥವಾ ಸಂಸ್ಥಾನದಲ್ಲಿ ಇಷ್ಟು ಬೇಗ ಆರಂಭವಾಗಿರಲಾರದು. ಇದರ ಶ್ರೇಯಸ್ಸು ಆಗಿನ ದಿವಾನ ರಾಗಿದ್ದ ಕೆ. ಶೇಷಾದ್ರಿ ಅಯ್ಯರರಿಗೆ ಸಲ್ಲಬೇಕು. ದಿವಾನರಲ್ಲಿ ಆಸಕ್ತಿ ಕೆರಳುವಂತೆ ಮಾಡಿದವರು ಬಿ. ಎಲ್. ರೈಸರೇ. ಈ ಕೆಲಸದ ಹೊಣೆಯನ್ನು ಹೊರಲು ರೈಸರನ್ನು ಬಿಟ್ಟು ಇದ್ದ ರಾದರೂ ಯಾರು? ಸರಿ, ಅವರ ಶಿಕ್ಷಣಖಾತೆಯ ಕಾರ್ಯ ದರ್ಶಿತ್ವದ ಜೊತೆಗೆ ಇದೂ ಸೇರಿಕೊಂಡಿತು. (ಪುಣ್ಯಕ್ಕೆ ಪೋಲೀಸ್ ಖಾತೆಯ ಕೆಲಸದಿಂದ ಅವರನ್ನು ಮುಕ್ತ ಮಾಡಲಾಯಿತು).

ಈ ವೇಳೆಗೆ ರೈಸರ ಹೆಸರು ಶಿಕ್ಷಣ ಕ್ಷೇತ್ರದಲ್ಲಿ ಅಖಿಲ ಭಾರತ ಪ್ರಸಿದ್ಧಿಯನ್ನು ಪಡೆದಿದ್ದಿತು. ಅವರ ಈ ಕಾರ್ಯ ವನ್ನು ಗೌರವಿಸುವ ದೃಷ್ಟಿಯಿಂದ ಮದ್ರಾಸು ವಿಶ್ವವಿದ್ಯಾ ಲಯದವರು ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಸನ್ಮಾನಿಸಿದರು (1887).

ಪುರಾತತ್ವ ಶಾಖೆಯನ್ನು ಆರಂಭಿಸಿದಾಗ, ಅದರ ಕೆಲಸ ಎಷ್ಟಾದೀತೆಂಬುದರ ಬಗ್ಗೆ ರೈಸರಿಗಾಗಲೀ ದಿವಾನರಿಗಾಗಲೀ ಸ್ಪಷ್ಟ ಕಲ್ಪನೆ ಇರಲಿಲ್ಲ. ದೂರದಿಂದ ಕಂಡಿದ್ದ ಪರ್ವತದ ಹತ್ತಿರ ಹೋದಹೋದಂತೆಲ್ಲ, ಅದರ ಎತ್ತರ, ಗಾತ್ರಗಳು ಅಗಾಧವಾಗಿ ಬೆಳೆಯುತ್ತ ಹೋಗುವಂತೆ ಈ ಕೆಲಸದ ಸ್ಥಿತಿ ಯಿದ್ದಿತು! ಅಲ್ಲದೆ ಅದರ ಮಹತ್ವವೂ ಗೋಚರವಾಯಿತು. ದಿವಾನರು 1890ರಲ್ಲಿ ರೈಸರನ್ನು ಆ ಇಲಾಖೆಯ ಪೂರ್ಣಾಧಿ ಕಾರಿಯನ್ನಾಗಿ ಮಾಡಿದರು. ಆಗ ರೈಸರಿಗೆ 53 ವರ್ಷ. ಇನ್ನೆರಡು ವರ್ಷಕ್ಕೆ ನಿವೃತ್ತರಾಗಿ, ಒಳ್ಳೆಯ ಪೆನ್ಸನ್ ಪಡೆದು,

ಇಂಗ್ಲೆಂಡದಲ್ಲಿ ನೆಮ್ಮದಿಯಿಂದ ಬಾಳಬಹುದಿತ್ತು. ಆದರೆ ಶಾಸನಗಳ ಶೋಧ ಮತ್ತು ಅವುಗಳ ಪ್ರಕಟಣೆಯ ದೊಡ್ಡ ಹೊಣೆ ಇತ್ತಾದ್ದರಿಂದ ಅದನ್ನು ಮುಗಿಸಿಯೇ ನಿವೃತ್ತರಾಗಬೇಕೆಂದು ನಿರ್ಧರಿಸಿದರು. ಆದರೆ ಆ ಕೆಲಸವು 14 ವರ್ಷಗಳ ವರೆಗೆ ಮುಂದುವರಿಯಿತು. ಆಗಿನ ಕಾಲಕ್ಕೆ, ಅದೇಕೆ ಈಗಲೂ ಸಹ, ನಿವೃತ್ತಿ ವಯಸ್ಸಿನ ಅನಂತರ ಇಷ್ಟೊಂದು ದೀರ್ಘ ಕಾಲದವರೆಗೆ, ನೌಕರಿಯಲ್ಲಿ ತಾವಾಗಿ ಉಳಿಯುವವರು ಅದೆಷ್ಟು ಜನರು ಸಿಕ್ಕಾರು ? ಕೈಕೊಂಡ ಕೆಲಸವನ್ನು ಪಟ್ಟುಹಿಡಿದು, ಮುತುವರ್ಜಿಯಿಂದ ಮಾಡಿ ಮುಗಿಸಬೇಕೆನ್ನುವ ತಂದೆಯ ಗುಣವು ಇವರಲ್ಲಿ ದ್ವಿಗುಣಿತವಾಗಿ ಇತ್ತೆನ್ನಬಹುದು. ಅಂತೂ ಬಿ. ಎಲ್. ರೈಸರು ತಮ್ಮ 69–70ನೇ ವಯಸ್ಸಿನಲ್ಲಿ ನಿವೃತ್ತರಾದರು. ಇಂಗ್ಲೆಂಡದಲ್ಲಿ ಹ್ಯಾರೋ ಪಟ್ಟಣದ ಉಪನಗರದಂತಿದ್ದ ಹ್ಯಾರೊ–ಆನ್–ದಿ–ಹಿಲ್ ಎಂಬಲ್ಲಿ ನೆಲೆಸಿದರು. ಈ ವೇಳೆಗೆ ಅವರದು ಆರು ಜನ ಗಂಡುಮಕ್ಕಳ ಹಾಗೂ ನಾಲ್ವರು ಹೆಣ್ಣುಮಕ್ಕಳ ತುಂಬು ಸಂಸಾರವಾಗಿದ್ದಿತು. ಮೊಮ್ಮಕ್ಕಳೂ ಬಹು ಜನರಿದ್ದರು. ಸೇವಾವಧಿಯಲ್ಲಿ ಸಾಕಷ್ಟು ತಿರುಗಾಡಿದ್ದರೂ, ವಿಶೇಷ ಪರಿಶ್ರಮ ಪಟ್ಟಿದ್ದರೂ ನಿಯಮನಿಷ್ಠವಾದ ಜೀವನ ನಡೆಸಿದ್ದರಾದ್ದರಿಂದ. ಆ 70ನೇ ವಯಸ್ಸಿನಲ್ಲಿಯೂ ಅವರ ಆರೋಗ್ಯ ಚೆನ್ನಾಗಿಯೇ ಇದ್ದಿತೆನ್ನಬಹುದು.

ಇನ್ನೀಗ, ಅವರು ತಮ್ಮ 46 ವರ್ಷಗಳ ಸುದೀರ್ಘ ಸೇವಾವಧಿಯಲ್ಲಿ ನಮ್ಮ ನಾಡಿಗಾಗಿ ಏನೇನು ಕೆಲಸ ಮಾಡಿದರೆಂಬುದನ್ನು ತುಸು ವಿವರವಾಗಿ ತಿಳಿದುಕೊಳ್ಳೋಣ.

## ಪಂಪಮಹಾಕವಿಯನ್ನು ದರ್ಶನ ಮಾಡಿಸಿದರು

ಬಿ. ಎಲ್. ರೈಸರ ಕಾರ್ಯರಂಗವನ್ನು ಶಿಕ್ಷಣ, ಸಾಹಿತ್ಯ ಮತ್ತು ಇತಿಹಾಸ-ಎಂದು ಮೂರು ವಿಧವಾಗಿ ರೂಪಿಸಬಹುದು. ಸುಮಾರು 30 ವರ್ಷಗಳವರೆಗೆ ಮೈಸೂರಿನ ಶಿಕ್ಷಣ ಸೂತ್ರಗಳನ್ನು ವಹಿಸಿಕೊಂಡು ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಅವರ ಕಾಲದಲ್ಲಿ ಮೈಸೂರ ಸಂಸ್ಥಾನದಲ್ಲಿಯ ಶಾಲೆಗಳ ಸಂಖ್ಯೆ ಎಷ್ಟೋ ಪಟ್ಟು ಬೆಳೆಯಿತು. ಪಾಠ್ಯಕ್ರಮದಲ್ಲಿ ತುಂಬ ಸುಧಾರಣೆಗಳನ್ನು ಮಾಡಲಾಯಿತು. ರೈಸರು ಹಂಟರ್ ಕಮೀಶನ್ನಿನ ಮೂಲಕ, ಭಾರತೀಯ ಶಿಕ್ಷಣರಂಗದಲ್ಲಿಯೂ ಕೆಲಸ ಮಾಡಿದ್ದನ್ನು ಈ ಮುಂಚೆ ಹೇಳಿದ್ದೇವೆ. ಜೊತೆಗೆ ಕೊಡಗಿನ ಜನರ ಶಿಕ್ಷಣ ಸುಧಾರಣೆಗಾಗಿಯೂ ಅವರು ಸಾಕಷ್ಟು ಕೆಲಸ ಮಾಡಿದರು. (ಕೊಡಗು ಆಗ ಪ್ರತ್ಯೇಕ ಪ್ರದೇಶವಾಗಿದ್ದಿತು.) ಕ್ರಿ. ಶ. 1884ರಲ್ಲಿ ಆ ಪ್ರದೇಶದವರಿಗಾಗಿ ಶಿಕ್ಷಣ ಯೋಜನೆಯನ್ನು ರೂಪಿಸಿದರು. ಅದರ ವರದಿಯು ಇತರ ಸರಕಾರಿ ವರದಿಯಂತಿರದೆ ಕೊಡಗಿನ ಶಿಕ್ಷಣರಂಗದ ಸ್ಪಷ್ಟ ಚಿತ್ರಣವೇ ಅಲ್ಲಿದೆ.

ಸಾಹಿತ್ಯ ಕ್ಷೇತ್ರದಲ್ಲಿ, ಅವರೇನೂ ಕನ್ನಡ ಗ್ರಂಥಗಳನ್ನು ಬರೆಯಲಿಲ್ಲ. ಕಥೆ, ಕವಿತೆಗಳನ್ನು ರಚಿಸಲಿಲ್ಲ. ಆದರೆ ನಮ್ಮ ಪ್ರಾಚೀನ ಕೃತಿಗಳನ್ನು ಕಂಡುಹಿಡಿದು, ಅವುಗಳಲ್ಲಿ ಮುಖ್ಯವಾದವುಗಳನ್ನು ಪ್ರಕಟಿಸಿದರು. ನಮಗೆ ಇಂದು ನೂರಾರು ಹಳೆಯ ಕನ್ನಡ ಕಾವ್ಯಗಳು ಮುದ್ರಿತ ರೂಪದಲ್ಲಿ ಟೀಕೆ ಟಿಪ್ಪಣಿಗಳೊಡನೆ ದೊರೆಯುತ್ತವೆ. ಆದರೆ ಈಗ ನೂರು ವರ್ಷಗಳ ಹಿಂದೆ, ಅಂಥವು ಕೇವಲ 5-10 ಇದ್ದುವು. ಅನೇಕ ಪ್ರಸಿದ್ಧ ಕವಿಗಳ ಹೆಸರುಗಳು ಕೂಡ ಆಗ ಗೊತ್ತಿರಲಿಲ್ಲ.



ಕನ್ನಡದ ಆದಿಕವಿಯೆಂದು ನಾವು ಪಂಪನನ್ನು ಸಮ್ಮಾನಿಸುತ್ತೇವಷ್ಟೆ. ಆವನ ಭಾರತವು (ವಿಕ್ರಮಾರ್ಜುನವಿಜಯ) ಅತ್ಯಂತ ಶ್ರೇಷ್ಠ ಕಾವ್ಯವೆಂದು ಕೊಂಡಾಡುತ್ತೇವೆ. "ಪಸರಿಪ ಕನ್ನಡಕ್ಕೊಡೆಯನೊರ್ವನೆ ಪಂಪಂ" ಎಂಬುದಾಗಿ ಇನ್ನೊಬ್ಬ ಕವಿಯು ಹೇಳಿದ್ದನ್ನು ನಾವೂ ಅನುಮೋದಿಸುತ್ತೇವೆ. ಅಂಥ ಪಂಪಮಹಾಕವಿಯನ್ನು ಕನ್ನಡ ಜನತೆಗೆ ದರ್ಶನ ಮಾಡಿಸಿದವರು ರೈಸರೇ. ಆವನ ಹೆಸರನ್ನಿಟ್ಟುಕೊಂಡ (ಅಭಿನವ

ಪಂಪ) ನಾಗಚಂದ್ರನೆಂಬ ಇನ್ನೊಬ್ಬ ಜೈನ ಕವಿ ಆಗಿ ಹೋದನು. ಈತ ರಾಮಾಯಣವನ್ನು ಬರೆದಿದ್ದು, ಅದಾದರೂ ಉತ್ಕೃಷ್ಟ ಕಾವ್ಯವೆನಿಸಿದೆ. ರೈಸರು ಈ ಕಾವ್ಯವನ್ನು ಸಹ ಪ್ರಕಟಿಸಿದ್ದಾರೆ.

ರೈಸರ ಪ್ರಕಟನ ಕಾರ್ಯವೆಂದರೆ ಮೂಲಗ್ರಂಥವನ್ನು ಇದ್ದಕ್ಕಿದ್ದಂತೆ ಪ್ರಕಟಿಸಿಬಿಡುವುದಲ್ಲ. ತಾಡವೋಲೆಯ ಮೇಲೆ ಪ್ರತಿ ಮಾಡುವವರಿಂದ ಆದ ತಪ್ಪುಗಳನ್ನು ತಿದ್ದಿಕೊಂಡು, ಪಕ್ಕಾ ಪ್ರತಿಯನ್ನು ಸಿದ್ಧಪಡಿಸಬೇಕು. (ಸರಿಯಾದ ಪಾಠ ಯಾವುದೆಂಬುದನ್ನು ತಿಳಿಯುವುದು ಕಷ್ಟದ ಕೆಲಸ. ಅದು ಈಗ ಒಂದು ದೊಡ್ಡ ಶಾಸ್ತ್ರವಾಗಿ ಬೆಳೆದಿದೆ). ಆಮೇಲೆ ಆ ಕೃತಿಯನ್ನೂ ಕವಿಯನ್ನೂ ಪರಿಚಯಿಸುವ ಪೀಠಿಕೆ ಬರೆಯ ಬೇಕು. ಈ ಪೀಠಿಕೆಯಲ್ಲಿ ಆಗಿನವರೆಗೆ ತಿಳಿದುಬಂದ, ಇತರ ಕವಿಗಳ ಕಿರುಪರಿಚಯ ಇರಬೇಕು. ರೈಸರ ಗ್ರಂಥ ಸಂಪಾದನಾ ಕಾರ್ಯದ ಇನ್ನೊಂದು ವೈಶಿಷ್ಟ್ಯವೆಂದರೆ ರೋಮನ್ ಲಿಪಿಯಲ್ಲಿ ಮೂಲ ಕಾವ್ಯವನ್ನು ಕೊಡುವುದು. ಜೊತೆಗೆ ಕಾವ್ಯದ ಸಾರವನ್ನು ಇಂಗ್ಲಿಷಿನಲ್ಲಿ ಕೊಡುತ್ತಿದ್ದರು. ಇದರಿಂದಾಗಿ ಕನ್ನಡೇತರರೂ ಕನ್ನಡ ಕಾವ್ಯಗಳ ಸೊಬಗನ್ನು ಅರಿತುಕೊಳ್ಳಲು ಸಹಾಯವಾಗುತ್ತಿತ್ತು. ತಮ್ಮೀ ಪ್ರಕಟನ ಕಾರ್ಯಕ್ಕೆ ವ್ಯವಸ್ಥಿತ ರೂಪವನ್ನು ಕೊಡುವ ಉದ್ದೇಶದಿಂದ ರೈಸರು, ಅದಕ್ಕೆ "ಬಿಬ್ಲಿಯಾಥೆಕಾ ಕರ್ನಾಟಿಕಾ" ಎಂದು ನಾಮಕರಣ ಮಾಡಿದರು. ಪಂಪ, ಅಭಿನವಪಂಪರ ಕಾವ್ಯಗಳಲ್ಲದೆ ಕನ್ನಡ ವ್ಯಾಕರಣ, ಲಕ್ಷಣ ಗ್ರಂಥಗಳಾದ ಭಾಷಾಭೂಷಣ, ಶಬ್ದಾನುಶಾಸನ, ಕಾವ್ಯಾವಲೋಕನ–ಇವುಗಳನ್ನು ಸಹ ಪ್ರಕಟಿಸಿದರು. ಕನ್ನಡದ ಮೊತ್ತಮೊದಲಿನ ಕಾವ್ಯ ಎನಿಸಿದ 'ಕವಿರಾಜಮಾರ್ಗ'ದ ಹಸ್ತಪ್ರತಿಯನ್ನು

ರೈಸರೇ ಕಂಡುಹಿಡಿದು, ತಮ್ಮ ಸಹೋದ್ಯೋಗಿಯಾದ ಕೆ. ಬಿ. ಪಾಠಕ ಎಂಬವರಿಗೆ ಅದನ್ನು ಸಂಪಾದಿಸಹೇಳಿದರು. "ಬಿಬ್ಲಿಯಾಥೆಕಾ ಕರ್ನಾಟಿಕಾ" ಮಾಲಿಕೆಯಲ್ಲಿ ಅದನ್ನು ಪ್ರಕಟಿಸಿದರು.

ರೈಸರು ಆದೇ ಹೊಸದಾಗಿ ಕನ್ನಡನಾಡಿಗೆ ಬಂದಾಗ ( 1860 ರಲ್ಲಿ ) ಅವರಿಗೆ "ಕನ್ನಡದಲ್ಲಿ ಹೇಳಿಕೊಳ್ಳುವಂಥ ಸಾಹಿತ್ಯ ಇಲ್ಲವೇ ಇಲ್ಲ. ಕನ್ನಡ ಭಾಷೆಯೋ ತಮಿಳಿನ ಒಂದು ಒರಟಾದ ಉಪಭಾಷೆ" ಎಂಬುದಾಗಿ ಅವರಿವರು ಹೇಳಿದ್ದರಂತೆ. ಆದರೆ ಶಾಲಾ ಇನ್‌ಸ್ಪೆಕ್ಟರರಾಗಿ ರೈಸರು ಹಳ್ಳಿ, ಹೋಬಳಿಗಳಲ್ಲಿ ಸಂಚರಿಸುತ್ತಿದ್ದಾಗ ಅವರಿಗೆ ಅನೇಕ ಹಸ್ತಪ್ರತಿಗಳು ದೊರೆಯತೊಡಗಿದವು. ಹಳಗನ್ನಡ ಕಾವ್ಯಗಳು ಮುದ್ರಿತ ಸ್ವರೂಪದಲ್ಲಿದ್ದರೂ ಅವನ್ನು ಓದಿ ಅರ್ಥಮಾಡಿಕೊಳ್ಳುವುದು ನಮಗೆ ಕಷ್ಟವಾಗುತ್ತದೆ. ರೈಸರಿಗೆ ಹಳಗನ್ನಡ ಕಾವ್ಯಗಳ ಪರಿಚಯ ಇರುವುದಾದರೂ ಹೇಗೆ? ಆದರೂ ಬಹುಪ್ರಯಾಸದಿಂದ ಓದತೊಡಗಿದರು. ಓದಿದಂತೆಲ್ಲ, ಅವುಗಳಲ್ಲಿಯ ಕಾವ್ಯ ಗುಣವು ಮನವರಿಕೆಯಾಯಿತು. ಗೌರವ ಭಾವನೆಯುಂಟಾಯಿತು. "ಹಿಂದಿನ ಕಾವ್ಯಗಳಲ್ಲಿ ಕಂಡುಬರುವ ಉತ್ತಮಿಕೆಯನ್ನು ನೆನೆದರೆ ಇಂದಿನ ಇಳಿತರವು ಸ್ಪಷ್ಟವಾಗಿ ತೋರುತ್ತದೆ. ವಾಗ್ವೈಖರಿಯುಳ್ಳ ಭಾವಗರ್ಭಿತವಾದ ಕರ್ನಾಟಕ ಭಾಷಾಸಂಪತ್ತಿನ ಪುನರುಜ್ಜೀವನಕ್ಕೆ ಈ ಸಂಶೋಧನಗಳಿಂದ ಸ್ವಲ್ಪ ಸಹಾಯವಾದರೆ ನನ್ನೀ ಶ್ರಮವು ಸಾರ್ಥಕವೆಂದು ತಿಳಿಯುತ್ತೇನೆ" ಎಂಬುದಾಗಿ ಅವರು ತಮ್ಮೊಂದು ಗ್ರಂಥದ ಪೀಠಿಕೆಯಲ್ಲಿ ಹೇಳಿದ್ದಾರೆ.

ಹೀಗೆ ರೈಸರು ನಮ್ಮ ಕನ್ನಡ ಸಾಹಿತ್ಯದ ಪುನರುಜ್ಜೀವನಕ್ಕೆ ತಳಹದಿಯನ್ನು ಒದಗಿಸಿದ್ದಾರೆ. ಸುಮಾರು 300 ಜನ

ಕವಿಗಳನ್ನು ನಮಗೆ ಪರಿಚಯಿಸಿಕೊಟ್ಟಿದ್ದಾರೆ. ಆದರಿಂದಾಗಿ ನಮಗೆ ಕನ್ನಡ ಸಾಹಿತ್ಯದ ವಿಸ್ತಾರ ವೈವಿಧ್ಯ ಹಾಗೂ ಗುಣಮಟ್ಟ–ಇವು ತಿಳಿದುಬಂದುವು. ಇದೇ ಬಗೆಯ ಕೆಲಸ ವನ್ನು ಬಾಸೆಲ್ ಮಿಶನ್ನಿನ ರೆ. ಕಿಟೆಲ್ ಅವರೂ ಮಾಡಿದ್ದನ್ನು ನೆನೆಯಬೇಕು.

ಹಳಗನ್ನಡ ಸಾಹಿತ್ಯದ ಉದ್ಧಾರ ಕಾರ್ಯಕ್ಕಾಗಿ ಅವರು ಇನ್ನೂ ಅಷ್ಟು ಕೆಲಸ ಮಾಡಬಹುದಿತ್ತು. ಆದರೆ ಶಾಸನ ಸಂಶೋಧನೆಯು ಪರ್ವತದಷ್ಟು ಇದ್ದಿತು. ಅದರಿಂದ ಬಿಡು ವೆಂಬುದೇ ಉಳಿಯಲಿಲ್ಲ. ಆದರೂ ಈ ಕೆಲಸಕ್ಕೆ ಅಂದರೆ ಹಳಗನ್ನಡ ಹಸ್ತಪ್ರತಿಗಳನ್ನು ಹುಡುಕುವ, ಸಂಪಾದಿಸಿ ಪ್ರಕಟಿಸುವ ವಿಷಯದಲ್ಲಿ ಆರ್. ನರಸಿಂಹಚಾರ್ಯ ಎಂಬವ ರನ್ನು ತರಬೇತುಗೊಳಿಸಿದ್ದರೆನ್ನಬಹುದು. ಅನಂತರ ನರ ಸಿಂಹಾಚಾರ್ಯರು ಸುಮಾರು 1,200 ಜನ ಪ್ರಾಚೀನ ಕವಿ ಗಳನ್ನು ಪರಿಚಯ ಮಾಡಿಕೊಡುವಂಥ, "ಕರ್ಣಾಟಕ ಕವಿ ಚರಿತೆ"ಯನ್ನು ಮೂರು ದೊಡ್ಡ ಸಂಪುಟಗಳಲ್ಲಿ ಒದಗಿಸಿ ದ್ದಾರೆ. ಕನ್ನಡ ಸಾಹಿತ್ಯದಲ್ಲಿ ರೈಸರಿಗೆ ಎಷ್ಟೊಂದು ಆಸ್ಥೆ ಇತ್ತೆಂದರೆ, ಈ ಸಂಪುಟಗಳು ಒಂದೊಂದಾಗಿ ಪ್ರಕಟವಾದಂತೆ ಆರ್. ನರಸಿಂಹಾಚಾರ್ಯರು,ರೈಸರು ವಾಸವಾಗಿದ್ದ ಹಾರ್‍ರೋ ಪಟ್ಟಣಕ್ಕೆ ಕಳಿಸಿಕೊಡುತ್ತಿದ್ದರು. ಅವನ್ನು ಪರಿಶೀಲಿಸಿ ರೈಸರು ಆಚಾರ್ಯರ ಕಾರ್ಯವನ್ನು ಮನಸಾರೆ ಹೊಗಳಿ ಪತ್ರ ಬರೆದರು. ಇಷ್ಟೇ ಅಲ್ಲ, ಕನ್ನಡ ಕವಿಗಳ ಆ ಚರಿತ್ರ ಗ್ರಂಥಗಳನ್ನು ಇಂಗ್ಲಿಷ್ ಬಾಷೆಗೆ ಅನುವಾದ ಮಾಡುವ ಅಪೇಕ್ಷೆಯನ್ನು ತೋರಿದರು–ಆ ಹಣ್ಣು ವಯಸ್ಸಿನಲ್ಲಿ!

ಸಂಸ್ಕೃತ ಸಾಹಿತ್ಯ ವಿಚಾರದಲ್ಲಿಯೂ ರೈಸರು ಪರಿ ಶ್ರಮಪಟ್ಟಿದ್ದಾರೆ.ಅವರು ಶಿಕ್ಷಣಾಧಿಕಾರಿ ಆದ ಹೊಸತರಲ್ಲಿ,

# MYSORE AND COORG

## FROM THE INSCRIPTIONS

**Published for Government**

BY

B. LEWIS RICE, C.I.E.

M.R.A.S., M.R.S.A.

LATE DIRECTOR OF ARCHÆOLOGICAL RESEARCHES

FORMER DIRECTOR OF PUBLIC INSTRUCTION IN MYSORE AND COORG

EDITOR OF THE GAZETTEERS OF MYSORE AND COORG FOR THE

'NEW IMPERIAL GAZETTEER OF INDIA

LONDON

ARCHIBALD CONSTABLE & CO. LTD

1909

ಓರ್ವ ಹಳೆಯ ಪಂಡಿತರು ಸಂಸ್ಕೃತದಲ್ಲಿ ರಾಮಾಯಣ ಸಂಗ್ರಹವನ್ನು ಬರೆದು ರೈಸರಿಗೆ ತಂದು ತೋರಿಸಿದರು. ಅದನ್ನು ಮೆಚ್ಚಿದ ರೈಸರು ಸರಕಾರದ ವತಿಯಿಂದಲೇ ಅದನ್ನು ಪ್ರಕಟಿಸಿದರು (1868). ಹಾಗೆ ನೋಡಿದರೆ ಇದೇ ಅವರ ಪ್ರಥಮ ಪ್ರಕಟನೆ. ಸಂಸ್ಕೃತ ಸಾಹಿತ್ಯದ ಪುನರುಜ್ಜೀವನದ ದೃಷ್ಟಿಯಿಂದ ಆಗಿನ ಕೇಂದ್ರ ಸರಕಾರವು ಹಸ್ತಪ್ರತಿಗಳನ್ನು ಕಲೆಹಾಕುವ ಕೆಲಸವನ್ನು ಆ ಆ ಪ್ರಾಂತಗಳಿಗೆ ಒಪ್ಪಿಸಿದ್ದಿತು. ರೈಸರು ಮೈಸೂರು ಮತ್ತು ಕೊಡಗು ಸಂಸ್ಥಾನಗಳಲ್ಲಿರುವ, ಸಂಸ್ಕೃತ ಹಸ್ತಪ್ರತಿಗಳ ಬಗ್ಗೆ ಮಾಹಿತಿಯನ್ನು ಕಲೆಹಾಕಿದರು. ಸುಮಾರು 3,000 ಹಸ್ತಪ್ರತಿಗಳ ವಿವರ ದೊರೆತದ್ದನ್ನು ಪುಸ್ತಕ ರೂಪದಲ್ಲಿ ಬೆಳಕಿಗೆ ತಂದರು.

ಇದಕ್ಕಿಂತ ಮುಖ್ಯವಾದ ಪ್ರಕಟನೆಯೆಂದರೆ ಅಮರಕೋಶದ್ದು. ಆಗಿನ ಶಾಲೆಗಳಲ್ಲಿ ಅಮರಕೋಶವನ್ನು ಕಲಿಯುವುದು ಕಡ್ಡಾಯವಾಗಿದ್ದಿತು. ಕಲಿಯುವುದೆಂದರೆ ಬಾಯಿಪಾಠ ಮಾಡುವುದು! ಆದ್ದರಿಂದ ಅದರ ಪಠ್ಯಭಾಗ ಮಾತ್ರವೆ ಮುದ್ರಿತವಾದ ಪುಸ್ತಕಗಳು ಪೇಟೆಯಲ್ಲಿ ದೊರೆಯುತ್ತಿದ್ದವು. ಆದರೆ ಅವುಗಳಲ್ಲಿಯ ಅಚ್ಚಿನ ದೋಷಗಳೋ, ಹೇಳತೀರದಷ್ಟು. ಮಕ್ಕಳು ಕಲಿಯುವಾಗ ಈ ತಪ್ಪುಗಳನ್ನೇ ಪುನರುಚ್ಚರಿಸುವರಲ್ಲಾ–ಎಂಬುದಾಗಿ ರೈಸರಿಗೆ ಬೇಸರವಾಯಿತು. ಅವರು ಸರಿಯಾದ ಪಾಠವುಳ್ಳ ಗ್ರಂಥವನ್ನು ಹೊರತಂದರು. ಇಂಗ್ಲಿಷ್ ಅರ್ಥವನ್ನೂ ಅದರಲ್ಲಿ ಸೇರಿಸಿದರು.

## ಮೈಸೂರು ಗಝೆಟಿಯರ್

ರೈಸರ ಇನ್ನೊಂದು ದೊಡ್ಡ ಸಾಧನೆಯೆಂದರೆ 'ಮೈಸೂರು ಗಝೆಟಿಯರ್'ನ ರಚನೆ. ಅವರು ಶಾಲಾ ಇನ್‌ಸ್ಪೆಕ್ಟರರಿದ್ದಾಗಲೇ, ಮೈಸೂರನ್ನು ಎಲ್ಲ ದೃಷ್ಟಿಯಿಂದ ಪರಿಚಯಿಸುವಂಥ ಗ್ರಂಥವನ್ನು ರಚಿಸಬೇಕೆಂದು ಯೋಚಿಸಿದ್ದರು. ಈ ಕೆಲಸ ಸುಲಭ ಸಾಧ್ಯವಿರಲಿಲ್ಲ. ಏಕೆಂದರೆ ಅಂಥ ಗ್ರಂಥ ಈ ಹಿಂದೆ ಇರಲಿಲ್ಲ. ಅದಕ್ಕೆ ಬೇಕಾದ ಮಾಹಿತಿಯು ಸರಕಾರೀ ಕಚೇರಿಗಳಲ್ಲಿ ವ್ಯವಸ್ಥಿತವಾಗಿ ಸಿಗುತ್ತಿರಲಿಲ್ಲ. ಹಂಟರನು ಬೆಂಗಳೂರಿಗೆ ಬಂದಿದ್ದಾಗ (1874) ಇವರು ಆದರ ಹೊಳಹನ್ನು ತೋರಿಸಿದರು. ಅವನಿಗೆ ತುಂಬ ಮೆಚ್ಚಿಗೆಯಾಯಿತು. "ಇಡೀ ಸಂಸ್ಥಾನಕ್ಕೆ ಸಂಬಂಧಿಸಿದಂತೆ ಗಝೆಟಿಯರ್ ರಚಿಸುವುದಂತೂ ಯೋಗ್ಯವೇ. ಜೊತೆಗೆ ಪ್ರತಿಯೊಂದು ಜಿಲ್ಲೆಯ ಬಗ್ಗೆಯೂ ಪ್ರತ್ಯೇಕವಾಗಿ ಬರೆಯಿರಿ" ಎಂದು ಸೂಚಿಸಿದನು. ರೈಸರಿಗೂ ಅದು ಸರಿಯೆಂದು ತೋಚಿತು.

ಎರಡು ವರ್ಷಗಳ ಸತತ ಪರಿಶ್ರಮದ ಫಲವಾಗಿ 'ಮೈಸೂರ್ ಎಂಡ್ ಕೂರ್ಗ್–ಎ ಗಝೆಟಿಯರ್' ಗ್ರಂಥವು ಮೂರು ಸಂಪುಟಗಳಲ್ಲಿ ಪ್ರಕಟವಾಯಿತು. ಮೊದಲಿನದು ಒಟ್ಟನಲ್ಲಿ ಮೈಸೂರಿನ ಚಿತ್ರಣವನ್ನು ಕೊಡುತ್ತದೆ. ಎರಡನೆಯದು ಜಿಲ್ಲಾವಾರು ಮಾಹಿತಿಯನ್ನು ಒಳಗೊಂಡಿದ್ದಿತು. ಮೂರನೆಯ ಸಂಪುಟವು ಕೊಡಗಿಗೆ ಮೀಸಲು.

ಗಝೆಟಿಯರ್–ಎಂದರೆ ಒಂದು ಪ್ರದೇಶದ ಪ್ರಾಕೃತಿಕ, ಭೌಗೋಲಿಕ ವಿವರಗಳನ್ನು ಒಳಗೊಂಡಿರುವಂಥದು. ಇದು ಮುಖ್ಯವಾದ ಭಾಗ. ಅನಂತರ ಆರ್ಥಿಕ, ಆಡಳಿತ, ಮುಂತಾದವುಗಳು ಬಂದಿರಬೇಕು. ರೈಸರು ಸಿದ್ಧಪಡಿಸಿದ ಮೈಸೂರು ಗಝೆಟಿಯರ್‌ನಲ್ಲಿ ಇವು ಇದ್ದೇ ಇವೆ. ಇವುಗಳ ಜೊತೆಗೆ

ಮೈಸೂರಿನ ಇತಿಹಾಸ, ಧರ್ಮ, ಭಾಷೆ, ಕಲೆಗಳು, ಉದ್ಯಮ ಗಳು, ನಾಣ್ಯ–ಈ ಅಂಶಗಳು ಉಳಿದ ಗಝೆಟಿಯರುಗಳಿಗಿಂತ ಹೆಚ್ಚು ಸ್ಫುಟವಾಗಿ, ವಿಸ್ತಾರವಾಗಿ ಬಂದಿವೆ. ಆದರ ಫಲವಾಗಿ ನಮಗೆ ಮೈಸೂರಿನ ಸಮಗ್ರವಾದ ಪರಿಚಯು ದೊರೆಯು ತ್ತದೆ. ಈ ಗ್ರಂಥವು ಇಂಗ್ಲಿಷಿನಲ್ಲಿ ಇದ್ದುದರಿಂದ ಕನ್ನಡೇತ ರರಿಗೂ ಸಹ ಮೈಸೂರಿನ ವಿಷಯ ತಿಳಿಯುವಂತಾಯ್ತು.

ಇದು ಪ್ರಕಟವಾದಾಗ "ಭಾರತದ ಯಾವುದೇ ಪ್ರದೇಶದ ಗಝೆಟಿಯರ್ ಇಷ್ಟರಮಟ್ಟಿಗೆ ನಿರ್ದುಷ್ಟ ಹಾಗೂ ಪರಿಪೂರ್ಣವಾಗಿರಲಿಲ್ಲ. ಅಲ್ಲದೆ ಇದು ಅತ್ಯಂತ ಸತ್ಯನಿಷ್ಠ ವಾದ ಬರವಣಿಗೆ, ಮುಂದಿನ ಗಝೆಟಿಯರುಗಳಿಗೆ ಮಾದರಿ ಯಾಗಬಲ್ಲುದು" ಎಂದು ಮುಂತಾಗಿ ಆಗಿನ ಹಲವಾರು ಪತ್ರಿಕೆಗಳು (ಉದಾಹರಣೆಗೆ 'ಕಲ್ಕತ್ತ ರಿವ್ಯೂ') ಹೊಗಳಿ ದುವು. ಹೀಗೆ ಇದು ರೈಸರಿಗೆ ಅಖಿಲಭಾರತ ಮನ್ನಣೆಯನ್ನು ತಂದುಕೊಟ್ಟಿತು. ಆಗಿನ ಕೇಂದ್ರ ಸರಕಾರವು ಇಡೀ ದೇಶಕ್ಕೆ ಅನ್ವಯಿಸುವಂತೆ ಇಂಪೀರಿಯಲ್ ಗಝೆಟಿಯರಿನ ಬೃಹತ್ ಯೋಜನೆಯನ್ನು ಹಮ್ಮಿಕೊಂಡಿದ್ದಿತು. ಆದರಲ್ಲಿ ಮೈಸೂರು ಮತ್ತು ಕೊಡಗಿನ ಬಗ್ಗೆ ಮಾಹಿತಿಯನ್ನು ರೈಸರ ಗಝೆಟಿ ಯರಿನಿಂದಲೇ ಸಂಗ್ರಹಿಸಿಕೊಡಲಾಯಿತು.

ಇದನ್ನು ಪ್ರಕಟಿಸಿ ಇಪ್ಪತ್ತು ವರ್ಷಗಳಾದ ಮೇಲೆ ರೈಸರೇ ಅದನ್ನು ಹೊಸ ಮಾಹಿತಿಯೊಡನೆ ಪರಿಷ್ಕರಿಸಿ ಮತ್ತಷ್ಟು ಚೆನ್ನಾಗಿ ಹೊರತಂದರು (1897). ಹಾಗೆ ಮಾಡುವ ಕಾಲಕ್ಕೆ ಶಾಸನಗಳ ಕೆಲಸ ಒಂದು ಹೊರೆಯಷ್ಟು ಇದ್ದರೂ ಈ ಕಾರ್ಯವನ್ನು ಪೂರ್ಣಮಾಡಿದರು. ಅದರ ಒಂದು ಕಾರಣ, ಮೈಸೂರಿನ ಬಗ್ಗೆ ಇದ್ದ ಉತ್ಕಟಾಭಿಮಾನ ವೆನ್ನಬೇಕು. ಈ ಗಝೆಟಿಯರಿನ ಮುನ್ನುಡಿಯಲ್ಲಿ ರೈಸರು

ಮೈಸೂರಿನ ಬಗ್ಗೆ ಕೆಲವು ಮಾತುಗಳನ್ನು ಹೇಳಿದ್ದಾರೆ. ಅಭಿಮಾನಪೂರ್ವಕವಾಗಿ ಬರೆದ ಆ ಮಾತುಗಳು ಆಣಿಮುತ್ತುಗಳೇ ಆಗಿವೆ. ಆದರ ಸಾರವನ್ನು ಇಲ್ಲಿ ಕೊಡುತ್ತೇವೆ.

"ಜಗತ್ತಿನ ಇತಿಹಾಸದಲ್ಲಿ ಕೆಲವೊಂದು ಅತಿ ಚಿಕ್ಕ ರಾಷ್ಟ್ರಗಳು ಬಹಳಷ್ಟು ಪ್ರಸಿದ್ಧಿಗೆ ಬಂದಿವೆ. ಶ್ರೇಷ್ಠ ಮಟ್ಟದ ನಾಯಕರನ್ನು ಒದಗಿಸಿವೆ.ಉದಾಹರಣೆಗೆ ಗ್ರೀಸ್,ಪೆಲಿಸ್ಟೈನ್, ಇಂಗ್ಲೆಂಡ್ ಇತ್ಯಾದಿ. ಇವುಗಳ ಮಾಲಿಕೆಯಲ್ಲಿ ಮೈಸೂರನ್ನೂ ಸೇರಿಸಬೇಕು. ಇಲ್ಲಿಯ ಪರ್ವತ ಶ್ರೇಣಿಗಳು, ವನಶ್ರೀ, ತುಂಬಿ ಹರಿಯುವ ನದಿಗಳು–ಇವುಗಳ ಸೊಬಗನ್ನು ನೋಡಿಯೆ ಸವಿಯಬೇಕು. ಕೆಲವೊಂದು ನೈಸರ್ಗಿಕ ಉತ್ಪಾದನೆಗಳು ಮೈಸೂರಿನ ವೈಶಿಷ್ಟ್ಯವಾಗಿವೆ. ಹಿಂದೂಸ್ತಾನದಲ್ಲಿ ಸಿಗುವ ಬಂಗಾರದ ಹೆಚ್ಚಿನ ಗಣಿಗಳು ಇಲ್ಲಿಯೇ ಇವೆ. ಮುಸಲ್ಮಾನರು ಇಲ್ಲಿಂದ ಸುಲಿಗೆ ಮಾಡಿ ಒಯ್ದ ಬೆಳ್ಳಿ–ಬಂಗಾರದ ಸಂಪತ್ತು ಮಧ್ಯ ಏಷಿಯದವರೆಗೂ ಹೋಗಿರಬೇಕು. ಗಂಧದ ಹಾಗೂ ತೇಗಿನ ಮರಗಳ ತವರೂರು–ಈ ಮೈಸೂರು. ಅವುಗಳ ಮಧ್ಯೆ ಬಾಳಿ ಬದುಕಿರುವ ಆನೆಗಳು, ಶಾಖಾಮೃಗಗಳು ಈ ನಾಡಿನ ವಿಶಿಷ್ಟ ಪ್ರಾಣಿಗಳು. ಇಲ್ಲಿ ಬೆಳೆಯುವ ಪೌಷ್ಟಿಕವಾದ ರಾಗಿಯನ್ನು ಮರೆಯುವುದೆಂತು? ಕಾಫಿಯ ಬೆಳೆಗೆ ಮೈಸೂರು 'ನರ್ಸರಿ'ಯಂತಿದೆ. ಇಂತು ಇದರ ಪ್ರಾಕೃತಿಕ ಸಂಪತ್ತನ್ನು ಎಷ್ಟು ಬಣ್ಣಿಸಿದರೂ ಸಾಲದು.

"ಇಲ್ಲಿಯ ಮಂದಿರ ಶಿಲ್ಪ ಮತ್ತು ಮೂರ್ತಿಶಿಲ್ಪ ಎಷ್ಟೊಂದು ಅಪ್ರತಿಮವಾಗಿದೆ! ಧರ್ಮ ವಿಚಾರದಲ್ಲಿ ಶಂಕರ ರಾಮಾನುಜ ಮಧ್ವರೆಂಬ ಮಹಾವಿಭೂತಿಗಳಿಗೆ ಆಶ್ರಯವಿತ್ತಿದೆ. ಪರಧರ್ಮ ಸಹಿಷ್ಣುತೆಗೆ ಈ ಪ್ರದೇಶವನ್ನೆ ಬೆರಳಿಟ್ಟು ತೋರಿಸತಕ್ಕುದು. ಬೌದ್ಧ, ಜೈನ, ಇಸ್ಲಾಂ–ಎಲ್ಲ ಧರ್ಮ

Indexes

Proper names –
Subjects
Vocabulary of most important words
Glossary of Concordance words of Hindu Theology &c
First lines

History of Dasas both in Canarese country & elsewhere in India. Their present manner of life, ceremonies, institutions &c.

Lives of Purandara Dasa & others –

Introd. on the Metres & Prosody & Music.

On the Poetical licence taken in spelling pronunciation, grammar &c

The Religious teaching of the Hymns

On the religious, & philosophical phrases used. e.g. ಸಂಸಾರ ಸಮುದ್ರ. ಪಾಪ. ಮುಕ್ತಿ. ಸ್ವರ್ಗ & the exact meanings attached to these.

Glossary of Mythology & Geog.

On the use of names of various Indian gods to denote Vishnu only.

ರೈಸರ ಕೈಬರೆಹ

ಗಳವರೂ ಇತಿಹಾಸ ಕಾಲದಿಂದ ಇಲ್ಲಿ ಸುಖ–ಶಾಂತಿಗಳಿಂದ ಬಾಳಿದ್ದಾರೆ.

"ಇಲ್ಲಿಯ ಮಲೆನಾಡು ಅನೇಕ ವೀರರಿಗೆ, ರಾಜಮನೆತನಗಳಿಗೆ ಜನ್ಮವಿತ್ತಿದೆ. ಕದಂಬರು, ಹೊಯ್ಸಳರು, ಪ್ರಾಯಶಃ ವಿಜಯನಗರದವರು ಸಹ. ಇತ್ತೀಚಿನ (18ನೇ ಶತಮಾನ) ಇತಿಹಾಸಕ್ಕೂ ಇದು ಅನ್ವಯಿಸುತ್ತದೆ. ನೆಪೋಲಿಯನ್ನನನ್ನು ಸುಪ್ರಸಿದ್ಧ ವಾಟರ್ಲೂ ಕಾಳೆಗದಲ್ಲಿ ಡ್ಯೂಕ್ ಆಫ್ ವೆಲಿಂಗ್ಟನ್ ಸೋಲಿಸಿದನಷ್ಟೆ. ಈ ಡ್ಯೂಕನು ಈಟನ್ನಿನಲ್ಲಿ ವಿದ್ಯಾರ್ಥಿಯಿದ್ದಾಗ ಅಲ್ಲಿಯ ಆಟದ ಬಯಲಲ್ಲಿ ಯುದ್ಧ ನೀತಿಯ ಆರಂಭದ ಪಾಠಗಳನ್ನು ಕಲಿತನೆಂದು ಹೇಳುವದುಂಟು. ಆದರೆ ಹಿಂದೂಸ್ತಾನದಲ್ಲಿ ಬ್ರಿಟಿಷರನ್ನು ನಡುಗಿಸಿದ, ಹಾಗೂ ಯುರೋಪದಲ್ಲಿ ಅವರ ಪರಮ ವೈರಿಯಾಗಿದ್ದ ನೆಪೋಲಿಯನ್ನನ ಸ್ನೇಹವನ್ನು ಬಯಸಿದ್ದ ಟೀಪೂಸುಲ್ತಾನನನ್ನು ಇದೇ ಡ್ಯೂಕನು ಸೋಲಿಸಿದನು. ಅರ್ಥಾತ್ ಅವನ ಯುದ್ಧ ಕೌಶಲವು ಈ ಮಲೆನಾಡಿನ ಪ್ರದೇಶಗಳಲ್ಲಿಯೇ ವಿಕಸನಗೊಂಡಿತಲ್ಲವೆ."

## ನೇಪಾಳ ರಾಜ್ಯವನ್ನು ಸ್ಥಾಪಿಸಿದವ ಕನ್ನಡಿಗನೇ!

ಒಂದು ದೇಶದ ಚರಿತ್ರೆಯನ್ನು ತಿಳಿಸುವ ಸಾಧನಗಳು ಹಲವಾರು ಇವೆ. ಉದಾಹರಣೆಗೆ ಸಾಹಿತ್ಯಗ್ರಂಥಗಳು, ಸ್ಥಳ ಪುರಾಣಗಳು, ಹ್ಯುಯೆನ್‌ತ್ಸಾಂಗ್ ಮುಂತಾದ ವಿದೇಶೀ ಪ್ರವಾಸಿಕರು ಬರೆದಿಟ್ಟ ದಾಖಲೆಗಳು, ಇತ್ಯಾದಿ. ಇವೆಲ್ಲದರಿಂದ ಹೊರಡುವ ಐತಿಹಾಸಿಕ ಮಾಹಿತಿಯು ಎಷ್ಟೋ ಪಾಲು ಹೆಚ್ಚಿಗೆ ಮಾಹಿತಿಯು ಶಾಸನಗಳಿಂದ ದೊರೆಯುತ್ತದೆ. ಅಲ್ಲದೆ, ಅವು ಆ ಆ ಕಾಲಕ್ಕೇನೆ ಬರೆಯಿಸಿದವುಗಳಾದ್ದರಿಂದ ಹೆಚ್ಚು

ವಿಶ್ವಾಸಾರ್ಹವಾಗಿವೆ.* ಇನ್ನು ಅವುಗಳನ್ನು ಬರೆಯಿಸಿದ ಉದ್ದೇಶ — ಯಾರೊಬ್ಬರ ದಾನಗುಣವನ್ನೊ, ಔದಾರ್ಯವನ್ನೊ, ಸಾಹಸಕಾರ್ಯವನ್ನೊ, ಧರ್ಮಶ್ರದ್ಧೆಯನ್ನೊ ವರ್ಣಿಸುವುದು. ಹಾಗೆ ಮಾಡುವಾಗ ನಮಗೆ ನಮ್ಮ ನಾಡಿನ ಜನಜೀವನದ ಪೂರ್ಣ ಚಿತ್ರವೇ ಅನಾಯಾಸವಾಗಿ ದೊರೆಯುತ್ತದೆ. ಹಿಂದಿನ ಕಾಲದಲ್ಲಿ ಆಡಳಿತ ಪದ್ಧತಿ ಹೇಗಿತ್ತು? ಯಾವ ಯುದ್ಧಗಳು ಎಲ್ಲಿ ಜರುಗಿದವು? ಯಾವ ಯಾವ ರಾಜರು ಎಷ್ಟು ಕಾಲದವರೆಗೆ ರಾಜ್ಯವಾಳಿದರು? — ಇವೂ ಗೊತ್ತಾಗುತ್ತವೆ. ಹೀಗೆ ಯಾವುದೇ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಭಾಷಿಕ, ಸಾಹಿತ್ಯಿಕ, ಕಲಾತ್ಮಕ ವಿಷಯವನ್ನು ಅಭ್ಯಾಸ ಮಾಡುವವರು ಶಾಸನಗಳನ್ನು ಪರಿಶೀಲಿಸಲೇ ಬೇಕಾಗುತ್ತದೆ. ಶಾಸನಗಳು ನಮಗೆ ಅಮೂಲ್ಯ ನಿಧಿಯಲ್ಲದೆ ಇನ್ನೇನು?

ಕೆಲವು ಉದಾಹರಣೆಗಳನ್ನು ಕೊಡೋಣವೆ? ಹಿಮಾಲಯದ ಪರ್ವತಶ್ರೇಣಿಯಲ್ಲಿಯ ನೇಪಾಳ ರಾಜ್ಯದಲ್ಲಿ ನಾನ್ಯದೇವ ಎಂಬವನು ಅಲ್ಲಿ ರಾಜ್ಯವನ್ನು ಸ್ಥಾಪಿಸಿ ಆಳತೊಡಗಿದನು. ಅವನ ಅನಂತರ ಗಂಗದೇವ ಮತ್ತು ಇನ್ನು ಕೆಲವರು ರಾಜ್ಯವನ್ನು ಆಳಿದರು. ಅವರಲ್ಲೊಬ್ಬನು ನೇಪಾಳದ ಇಂದಿನ ರಾಜಧಾನಿಯಾದ ಕಾಟಮಾಂಡುವನ್ನು ನಿರ್ಮಿಸಿದನು. ಈ ಮನೆತನದ ಮೂಲಪುರುಷನಾದ ನಾನ್ಯದೇವ ಅಥವಾ

* ಎಲ್ಲ ಶಾಸನಗಳೂ ನಂಬಲರ್ಹವೇನಲ್ಲ. ತಮ್ಮ ಸ್ವಾರ್ಥಸಾಧನೆಗಾಗಿ ಯಾವುದೋ ಹಿಂದಿನ ತಾರೀಖಿನ್ನು ಹಾಕಿ, ಆಸ್ತಿಯನ್ನು ಪಡೆಯುವ ಉದ್ದೇಶದಿಂದ ಬರೆಯಿಸಿ ಇಟ್ಟುಕೊಂಡ ಕೆಲವು ಶಾಸನಗಳೂ ಇಲ್ಲದಿಲ್ಲ. ಆದರೇನು. ಅವು ಖೋಟ್ಟಿಯೊ ಖರೆಯೊ ಎಂದು ನಿರ್ಣಯಿಸಲು ಬೇರೆ ಹತ್ತಾರು ಶಾಸನಗಳು ನೆರವಾಗುತ್ತವೆ.

ನನ್ನಿಯ ದೇವನು ಕನ್ನಡಿಗನಿದ್ದನೆಂಬುದನ್ನು ಊಹಿಸಲಿಕ್ಕಾದರೂ ಸಾಧ್ಯವೆ? ಗಂಗರಾಜ ಮನೆತನದ ಒಬ್ಬನಿಗೂ ಕಾಟಮಾಂಡು ನಗರಕ್ಕೂ ಅದೆಲ್ಲಿಯ ನಂಟು ಎನ್ನಬೇಡಿ. ಐತಿಹಾಸಿಕ ಸತ್ಯವದು — ಶಾಸನಗಳಿಂದ ಹೊರಟದ್ದು.

ಕೊಂಗಾಳ್ವರ ಒಬ್ಬ ಮಂತ್ರಿಯ ಹೆಸರು ಲಕುಳ ಎಂಬುದಾಗಿತ್ತು. 11ನೇ ಶತಮಾನದಲ್ಲಿದ್ದ ಅವನ ಬಗ್ಗೆ ಶಾಸನವೊಂದರಲ್ಲಿ ಉಲ್ಲೇಖವಿದ್ದು, ಅವನಿಗೆ ನಾಲ್ಕಾರು ಭಾಷೆಗಳು ಬರುತ್ತಿದ್ದವೆಂದು ಹೇಳಿದೆ. ಆಗಿನ ಕಾಲದಲ್ಲಿ ಕನ್ನಡ, ಸಂಸ್ಕೃತ ಇವೆರಡನ್ನು ಬಿಟ್ಟು ಮತ್ತಾವ ಭಾಷೆ ಬರಲು ಸಾಧ್ಯ? ಏನೋ ಹೊಗಳಿಕೆ ಇರಬೇಕು — ಎಂದು ನಿಮಗನಿಸೀತು. ಆದರೆ ಅವನ ಹೆಸರು, ಅರ್ಕಾಟು (ತಮಿಳು), ಬಡೋದೆ (ಗುಜರಾತ) — ಇಂಥ ಕನ್ನಡೇತರ ಪ್ರದೇಶಗಳ ಶಾಸನಗಳಲ್ಲೂ ಬರುತ್ತದಲ್ಲ! ಅಂತೂ ಕನ್ನಡಿಗರು ದೂರದೂರದವರೆಗೂ ಹೋಗುತ್ತಿದ್ದರು, ಪ್ರಸಿದ್ಧಿಯನ್ನು ಪಡೆದಿದ್ದರು — ಎಂಬುದು ಶಾಸನಗಳಿಂದ ಚೆನ್ನಾಗಿ ಮನದಟ್ಟಾಗಬಲ್ಲುದು.

ಶಾಸನಗಳಿಂದ ಜನಜೀವನವು ತಿಳಿದುಬರುತ್ತದೆ — ಎಂದೆವಷ್ಟೆ. ಕೆಲವು ಉದಾಹರಣೆಗಳಿವು : ಅರಕಲಗೂಡಿನ ಶಾನುಭೋಗನೊಬ್ಬ ಲಂಚ ತಿನ್ನುತ್ತಿದ್ದನೆಂಬ ಆಪಾದನೆಗೊಳಗಾದ. (ಲಂಚಾವತಾರ ಈಗಷ್ಟೇ ಅಲ್ಲ, ಹಿಂದಿನ ಕಾಲಕ್ಕೂ ಇದ್ದಿತು!) ಪ್ರಕರಣ ಮೈಮೇಲೆ ಬರುತ್ತಲೂ ಸುಟ್ಟುಕೊಂಡು ಸ ತ್ತ ನ ಂ ತೆ. ವಿಜಯನಗರದ ಅಚ್ಯುತರಾಯನು 'ಆನಂದನಿಧಿ' ಎಂಬ ಹೆಸರಿನಿಂದ ದುಡ್ಡನ್ನು ಕೂಡಿಸಿ. ಬಡ ವಿದ್ವಾಂಸರಿಗೆ ಹಂಚುತ್ತಿದ್ದನೆಂದು, 1529ರ ಒಂದು ಶಾಸನದಲ್ಲಿ ಬಂದಿದೆ. ಇಂದು ನಮಗೆಲ್ಲ ಗೊತ್ತಿರುವ

ಪ್ರಧಾನ ಮಂತ್ರಿ. ಇಲ್ಲವೆ ರಾಜ್ಯಗಳ ಮುಖ್ಯ ಮಂತ್ರಿಗಳ ಹೆಸರಿನಲ್ಲಿರುವ 'ಪರಿಹಾರನಿಧಿ'ಗಳ ಮೂಲ ಕಲ್ಪನೆಯೇ ಇಲ್ಲಿ ಕಂಡುಬರುತ್ತದಲ್ಲವೆ? ಊರಹೊರಗೆ ಮೇಯುವ ದನಗಳನ್ನೆಲ್ಲ ಓಡಿಸಿಕೊಂಡು ಹೋಗುವ ಎಷ್ಟೋ ಪ್ರಸಂಗಗಳಿದ್ದುವು. ಆಗ ಊರಿನ ಯುವಕನೊಬ್ಬ ಸಾಹಸದಿಂದ ಹೋರಾಡಿ, ದನಗಳನ್ನು ರಕ್ಷಿಸುತ್ತಿದ್ದ. ಅವನು ಆ ಹೋರಾಟದಲ್ಲಿ ಸತ್ತು ವೀರಸ್ವರ್ಗ ಸೇರಿದನೆಂದು, ಅವನ ಹೆಸರಿನಲ್ಲಿ ಶಾಸನವನ್ನು ಬರೆಯಿಸುತ್ತಿದ್ದರು. ಈ ಬಗೆಯ ತ್ಯಾಗವನ್ನು ವರ್ಣಿಸುವ ಅನೇಕಾನೇಕ ಶಾಸನಗಳನ್ನು ನಾವು ಕಾಣುತ್ತೇವೆ. ಅವುಗಳ ಮೂಲಕ ನಮ್ಮವರ ಬದುಕಿನ ಬಗೆಯನ್ನು ತಿಳಿಯುತ್ತೇವೆ. ಆದರೆ ಶಾಸನಗಳಿಂದ ಇಷ್ಟೆಲ್ಲ ಮಾಹಿತಿ ಹೊರಡುತ್ತದೆಂಬ ವಿಚಾರ ತಿಳಿದುಬಂದದ್ದೇ ರೈಸ್ (ಮತ್ತು ಇತರರ) ಸಂಶೋಧನೆಗಳಿಂದ!

ಕಾಲರಾಯನ ಮಹಿಮೆ ಶಾಸನಗಳ ಮೇಲೂ ಬೀಳದೆ ಇದ್ದೀತೆ? ಕಾಲ ಸರಿದಂತೆ — ಅವುಗಳ ಆಗಿನ ಲಿಪಿಯು ಮುಂದಿನ ಜನಾಂಗದವರಿಗೆ ತಿಳಿಯದೇ ಹೋಗುವುದು ಸಹಜವೇ. ಹೀಗಾಗಿ ಶಾಸನಗಳ ಬಗ್ಗೆ ಜನರಲ್ಲಿ ಮೂಢನಂಬಿಕೆಗಳು ಬೆಳೆಯತೊಡಗಿದವು. ಇವುಗಳಲ್ಲಿ ಏನೋ ಗೂಢವಿದೆಯೆಂದು ಮುಸಲ್ಮಾನ್ ಅರಸರು, ನವಾಬರು ಭಾವಿಸಿ ಅವನ್ನು ಓದಿಸುವುದಕ್ಕೆ ವ್ಯರ್ಥ ಪ್ರಯತ್ನ ಮಾಡಿದರು. ಹೊರಗಿನವರನ್ನು ಬಿಡಿ, ಸ್ಥಳೀಯ ಜನರಿಗೇನೆ ಶಾಸನಗಳ ಲಿಪಿ ಅರ್ಥವಾಗದೆ ಹೋಯಿತು. ಇವುಗಳ ಕೆಳಗೆ ದುಡ್ಡನ್ನು ಹೂಳಿರಬಹುದೆಂದು ದುರಾಸೆಪಟ್ಟು, ಅವನ್ನು ಕಿತ್ತು ಬಿಸಾಡಿದರು. ಹಾಗೆ ಬಿದ್ದ ಕಲ್ಲುಗಳನ್ನು ಅಜ್ಞರು ಮನೆಕಟ್ಟಲೆಂದೂ, ಬಚ್ಚಲಿನ ಮೋರಿಗೆಂದೂ ಉಪಯೋಗಿಸಿದರು.

ಆದರೆ ಅವನ್ನು ಓದಿಸುವ ಪ್ರಯತ್ನವನ್ನು, 17ನೇ ಶತಮಾನದಲ್ಲಿ ಮೈಸೂರು ಸಂಸ್ಥಾನವನ್ನು ಆಳುತ್ತಿದ್ದ ಚಿಕ್ಕದೇವರಾಜ ಒಡೆಯರು ಮಾಡಿದರು. ಗುಪ್ತಧನವನ್ನು ಕಂಡು ಹಿಡಿಯುವುದಾಗಲೀ, ಸಂಶೋಧನೆಯಾಗಲೀ ಅವರ ಉದ್ದೇಶವಾಗಿರಲಿಲ್ಲ. ಬೇರೆ ಬೇರೆ ದಾನಗಳನ್ನು, ಆಸ್ತಿಯ ಒಡೆತನಗಳನ್ನು ನಿಗದಿಗೊಳಿಸಲು ಅವರು ಇಚ್ಛಿಸಿದರು.

ಮುಂದೆ 18ನೇ ಶತಮಾನದಲ್ಲಿ ನಮ್ಮ ದೇಶಕ್ಕೆ ಐರೋಪ್ಯರು ಬರತೊಡಗಿದರಷ್ಟೆ. ಅವರೆಲ್ಲರಿಗೂ ನಮ್ಮ ಪ್ರಾಚೀನ ವಸ್ತುಗಳ ಬಗ್ಗೆ ಸ್ವಾಭಾವಿಕವಾಗಿಯೇ ಆಸಕ್ತಿ — ಕುತೂಹಲಗಳಿದ್ದುವು. ಆ ದೃಷ್ಟಿಯಿಂದ, ಮೆಕೆಂಝಿ, ಬುಕನನ್ ಎಂಬವರು, ಮತ್ತೂ ಹಲವರು ನಮ್ಮ ಶಾಸನಗಳ ಪ್ರತಿ ಮಾಡಿಕೊಂಡು ಸಂಗ್ರಹಿಸತೊಡಗಿದರು. ಆ ಮೇಲೆ ಬಂದ ಡಿಕ್ಸನ್ ಎಂಬಾತನು ಇನ್ನಷ್ಟು ವ್ಯವಸ್ಥಿತವಾಗಿ ಶಾಸನಗಳನ್ನು ಸಂಗ್ರಹಿಸಿ, ಸುಮಾರು 165 ಶಾಸನಗಳ ಪ್ರತಿಮಾಡಿ ಇಟ್ಟುಕೊಂಡಿದ್ದನು. ಅವನ್ನೇ ನಮ್ಮ ರೈಸರಿಗೆ ಒಪ್ಪಿಸಲಾಯಿತು. ಇದುವೆ ಅವರ ಶಾಸನ ಕಾರ್ಯದ ಮೂಲ ಬಂಡವಲು.

## ಎಪಿಗ್ರಾಫಿಯಾ ಕರ್ನಾಟಿಕಾ

ರೈಸರ ನೌಕರಿಯು ಶಿಕ್ಷಣ ಖಾತೆಯಲ್ಲಿದ್ದಿತು. ಡಿಕ್ಸನ್ನನ ಸಂಗ್ರಹ ಅವರ ಕೈ ಸೇರುವುದಕ್ಕೆ ಮುಂಚೆಯೇ, ಅವರು ಶಾಲಾ ಇನ್‌ಸ್ಪೆಕ್ಟರರಾಗಿ ಹಳ್ಳಿ, ಹೋಬಳಿಗಳಲ್ಲಿ ತಿರುಗಾಡುತ್ತಿದ್ದಾಗ, ಎಲ್ಲೆಲ್ಲಿಯೂ ಶಾಸನಗಳು ಕಂಡುಬರತೊಡಗಿದ್ದುವು. ಈ ನೌಕರಿಗೆ ಸೇರುವ ಮೊದಲು ಅವರು ಯಾವುದೇ ಶಾಸನಗಳನ್ನು ನೋಡಿರಲಿಲ್ಲ. ಅವುಗಳ ಮಹ

ತ್ವವೂ ಗೋಚರಿಸಿದ್ದಿಲ್ಲ. ಹೊಸಗನ್ನಡದ ಲಿಪಿಯನ್ನೇ ಈಚೆಗೆ ಅವರು ಕಲಿತವರಾದ್ದರಿಂದ, ಆ ಹಳೆಯ ಲಿಪಿ ಅರ್ಥವಾಗುವ ದಂತೂ ದೂರವೇ ಉಳಿಯಿತು. ಕ್ರಮೇಣ ಆಸ್ಥೆ ಹೆಚ್ಚುತ್ತ ಹೋಯಿತು. ಇಲ್ಲಿಗೆ ಬಂದ ಹೊಸತರಲ್ಲಿ ಅವರಿಗೆ ಕರ್ನಾಟಕದ ಇತಿಹಾಸವೆಂದರೆ, ಹೈದರ್–ಟೀಪ್ಪೂ, ಬಹಳವಾದರೆ ವಿಜಯನಗರದ ಅರಸರ ಹೆಸರಿನ ಮಟ್ಟಿಗೆ ಸೀಮಿತವಾಗಿತ್ತು. ಶಾಸನಗಳಿಂದ ಅದಕ್ಕೂ ಹೆಚ್ಚಿನ ಚಾರಿತ್ರಿಕ ಸಾಂಸ್ಕೃತಿಕ ಅಂಶಗಳನ್ನು ಕಂಡುಹಿಡಿಯಬಹುದೆಂಬುದು ಅವರಿಗೆ ವೇದ್ಯವಾಯಿತು. ತಾತ್ಪರ್ಯವೆಂದರೆ ಅವರು ಶಾಸನಗಳನ್ನು ಸಂಗ್ರಹಿಸುವ, ಓದುವ, ಅರ್ಥ ಹೊರಡಿಸುವ ಯಾವುದೇ ಅಂಶವನ್ನೂ ಓನಾಮದಿಂದಲೇ ಪ್ರಾರಂಭಿಸಬೇಕಾಯಿತು ಮತ್ತು ಸ್ವಪ್ರಯತ್ನದಿಂದಲೇ ಮುಂದುವರಿಯಬೇಕಾಗಿ ಬಂತು.

ಆಗಿನ ಮೈಸೂರಿನ ದಿವಾನರು, ಶಾಸನ ಸಂಶೋಧನೆಗಾಗಿ ಪ್ರತ್ಯೇಕ ಖಾತೆಯನ್ನು ತೆರೆದು, ರೈಸರನ್ನು ಅದರ ದಿಗ್ದರ್ಶಕರಾಗಿ ನೇಮಿಸಿದರಷ್ಟೆ. ಅವರಿಬ್ಬರಿಗೂ ಈ ಕೆಲಸ ಎಷ್ಟರಮಟ್ಟಿಗೆ ಇದ್ದೀತು — ಎಂಬುದರ ಸ್ಪಷ್ಟ ಕಲ್ಪನೆ ಇರಲೇ ಇಲ್ಲ. ಮಾಡುತ್ತ ಹೋದಹಾಗೆ, ಹನುಮಂತನ ಬಾಲದಂತೆ ಬೆಳೆಯುತ್ತಲೇ ನಡೆಯಿತು. ಹಾಗಾಗಿ ಅವರ ನಿವೃತ್ತಿ ವಯಸ್ಸು ದಾಟಿದ ಮೇಲೆಯೂ 14 ವರ್ಷಗಳವರೆಗೆ ಮುಂದುವರಿಯಿತಲ್ಲವೆ.

ಹಿಡಿದ ಕಾರ್ಯವನ್ನು ಮುಗಿಸುವಲ್ಲಿ ಅವರಿಗೆ ಆದೆಷ್ಟೋ ಅಡೆತಡೆಗಳು ಉಂಟಾದುವು. ಮುಖ್ಯವಾಗಿ, ಅವರಿಗೆ ತಜ್ಞರಾದ ಜೊತೆಗಾರರಿರಲಿಲ್ಲ. ಎಲ್ಲ ಬೌದ್ಧಿಕ ಕೆಲಸಗಳನ್ನು ಅವರೊಬ್ಬರೇ ಮಾಡಬೇಕಿದ್ದಿತು. (ಕೆಲಸ ಅರ್ಧ ದಾಟಿದ ಮೇಲೆ ಆರ್. ನರಸಿಂಹಾಚಾರ್ಯರಂಥ ವಿದ್ವಾಂಸರ




ಸಹಾಯ ದೊರಕಿತೆನ್ನುವ) ಇತ್ತ ರೈಸರಿಗೆ ಸರಕಾರದ ಬೇರೆ ಬೇರೆ ಶಾಖೆಗಳ ಕಾರ್ಯವನ್ನೂ ಒಪ್ಪಿಸಲಾಗಿದ್ದಿತೆಂಬುದನ್ನು ನೋಡಿದ್ದೇವೆ. ಅವುಗಳಿಂದ ಪರ್ಯಾಯವಾಗಿ ಈ ಕೆಲಸಕ್ಕೆ ಅಡಚಣೆಯೊದಗಿತು. ಶಾಸನಗಳನ್ನು ಸಂಗ್ರಹಿಸಹೋದಾಗ ಎಲ್ಲ ಜನರು ಪೂರ್ಣ ಸಹಕಾರ ನೀಡಿದರೆಂದೇನೂ ಇಲ್ಲ. ನೈಸರ್ಗಿಕ ಹಾವಳಿಗಳು ಈ ಮಧ್ಯೆ ಅಡ್ಡ ಹಾಯ್ದುವು.

ಕ್ರಿ. ಶ. 1877–78ರಲ್ಲಿ, ಸಂಸ್ಥಾನದಲ್ಲಿ ಭೀಕರ ಬರಗಾಲ ತಲೆದೋರಿತು. ಅದರ ಮುಂದಿನೆರಡು ವರ್ಷವೂ ಆಡಳಿತ ವನ್ನು, ಜನಜೀವನವನ್ನು ಅಸ್ತವ್ಯಸ್ತಗೊಳಿಸಿತು. ಕ್ರಿ. ಶ. 1898ರಲ್ಲಿ ಬಂದ ಪ್ಲೇಗಿನ ಪಿಡುಗು ಸಹ ಅಷ್ಟೇ ವ್ಯಾಪಕ ವಾಗಿದ್ದಿತು. ಪುಣ್ಯಕ್ಕೆ ಆ ವೇಳೆಗೆ ಶಾಸನ ಸಂಗ್ರಹ ಮುಗಿದು ಸಂಪಾದನ, ಮುದ್ರಣ ಕಾರ್ಯಗಳು ಉಳಿದಿದ್ದುವು.

ಈ ಹಿಂದೆ ಹೇಳಿದಂತೆ ರೈಸರೇ ಅತಿ ಹೆಚ್ಚಿನ ಸಂಖ್ಯೆ ಯಲ್ಲಿ ಶಾಸನಗಳನ್ನು ಸಂಗ್ರಹಿಸಿದವರಾಗಿದ್ದಾರೆ. ಈ ಮಾತು ಇಂದಿಗೂ ನಿಜ. ನಮ್ಮ ನಾಡಿನಲ್ಲಿ ಎಷ್ಟು ಶಾಸನಗಳಿವೆ ಯೆಂಬುದರ ಅಂದಾಜು ಕೂಡ ಸಿಕ್ಕಿಲ್ಲ. ಮೂವತ್ತು ಸಾವಿರ ಇದ್ದಿರಬಹುದು. ಅವುಗಳಲ್ಲಿ ಇದುವರೆಗೆ 20–23 ಸಾವಿರ ಶಾಸನಗಳು ಪ್ರಕಟವಾಗಿವೆ ಎಂದು ತಿಳಿದರೆ, 9 ಸಾವಿರ ದಷ್ಟನ್ನು ಅವರೊಬ್ಬರೇ ಕಂಡುಹಿಡಿದಿದ್ದಾರೆ. ಅವನ್ನು ಅವರು ಪ್ರಕಟಿಸಿ ಮುಗಿಸುವ ಕಾಲಕ್ಕಂತೂ, ಆಗಿನ ಶಾಸನ ಸಂಖ್ಯೆ ಅತಿ ಹೆಚ್ಚೆಂದರೆ 12 ಸಾವಿರ ಇದ್ದಿರಬೇಕು. ಆದಕ್ಕೇನೆ ಅವರನ್ನು 'ಶಾಸನ ಪಿತಾಮಹ'ರೆಂದು ಕರೆಯುವುದು ಅನ್ವರ್ಥಕವಾಗುತ್ತದೆ.

ಅವರು ಕಂಡುಹಿಡಿದ ಶಾಸನಗಳೆಲ್ಲವೂ 'ಎಪಿಗ್ರಾಫಿಯಾ ಕರ್ನಾಟಿಕಾ' ಎಂಬ ಸಂಪುಟಗಳಲ್ಲಿ ಅಡಕವಾಗಿವೆ. ಕರ್ನಾ ಟಕದ ಚರಿತ್ರೆಗೆ ಸಂಬಂಧಿಸಿದ ಯಾವುದೇ ಮಹತ್ವದ ವಿಚಾರ, ವಿಮರ್ಶೆ ನಡೆದರೆ, ಅವುಗಳ ಮೂಲ ಮಾಹಿತಿಯು ಎಪಿಗ್ರಾಫಿಯಾ ಕರ್ನಾಟಿಕಾದ ಸಂಪುಟವೊಂದರಲ್ಲಿ ತಪ್ಪದೇ ಇರುತ್ತದೆ. ಆದೇಕೆ ಭಾರತೀಯ ಇತಿಹಾಸ ವಿವೇಚನೆ ಇದ್ದಾ ಗಲೂ, ರೈಸರ ಈ ಸಂಪುಟಗಳನ್ನು ಪ್ರಸ್ತಾಪಿಸುವ ಪ್ರಸಂಗ ಎಷ್ಟೋ ಸಲ ಬರಲೂ ಸಾಕು. ಆದ್ದರಿಂದ ಈ ಸಂಪುಟಗಳ ಪರಿಚಯ ಮಾಡಿಕೊಳ್ಳುವುದು ಅವಶ್ಯವಾಗಿದೆ.

ಒಂದು ಸಾವಿರಕ್ಕಿಂತಲೂ ಹೆಚ್ಚು ಪುಟಗಳುಳ್ಳ ದೊಡ್ಡ ಆಕಾರದ ಈ ಸಂಪುಟಗಳು ಒಟ್ಟಿಗೆ 12 ಇವೆ. ಒಂದೊಂದು ಜಿಲ್ಲೆಗೆ ಒಂದರಂತೆ ಸಂಪುಟಗಳು ಮೀಸಲಾಗಿದ್ದರೂ ಮೈಸೂರು ಹಾಗೂ ಶಿವಮೊಗ್ಗ ಜಿಲ್ಲೆಗಳಲ್ಲಿ ಎರಡು ಇವೆ. ಇವುಗಳ ಮುದ್ರಣವು ಕ್ರಿ. ಶ. 1886ರಲ್ಲಿ ಕೊಡಗಿನ ಪ್ರದೇಶದಿಂದ ಮೊದಲಾಗಿ ತುಮಕೂರಿನ ಶಾಸನಗಳ ಪ್ರಕಟಣೆಯಲ್ಲಿ 1904ರಂದು ಮುಕ್ತಾಯವಾಯಿತು. ಶಾಸನಗಳ ಪಠ್ಯಭಾಗ, ಅವುಗಳ ಅನುವಾದ, ಜೊತೆಗೆ ರೋಮನ್ ಲಿಪಿಯಲ್ಲಿ ಶಾಸನದ ರೂಪಾಂತರ ಇವನ್ನು ಪ್ರತಿ ಸಂಪುಟದಲ್ಲಿ ಕಾಣುತ್ತೇವೆ. ಸಂಪುಟದ ವಿಸ್ತಾರವಾದ ಪೀಠಿಕೆಯಲ್ಲಿ, ಆ ಆ ಶಾಸನಗಳಿಂದ ಹೊರಡುವ ರಾಜಮನೆತನಗಳ ಚರಿತ್ರೆ, ಹಾಗೂ ಸಾಮಾಜಿಕ, ಧಾರ್ಮಿಕ ವಿಷಯಗಳನ್ನು ನಿರೂಪಿಸಲಾಗಿದೆ. ಒಂಬತ್ತು ಸಾವಿರ ಶಾಸನಗಳನ್ನೆಲ್ಲ ಚೆನ್ನಾಗಿ ಮನನ ಮಾಡಿ, ಅವುಗಳಲ್ಲಿಯ ಗತೇತಿಹಾಸದ ಎಳೆಗಳನ್ನು ಒಂದೊಂದಾಗಿ ಬಿಡಿಸಿಕೊಂಡು ರಾಜಕೀಯ, ಮತ್ತು ಸಾಂಸ್ಕೃತಿಕ ಇತಿಹಾಸವನ್ನು ರೂಪಿಸುವುದು ಸಾಮಾನ್ಯ ಮಾತೇನಲ್ಲ.* ರೈಸರು ಇಂಥ ಇತಿಹಾಸ ರಚನೆಯ ಕಾರ್ಯವನ್ನು ಕೈಕೊಳ್ಳುವುದಕ್ಕೆ ಪೂರ್ವದಲ್ಲಿ, ನಮಗೆ 5 ಶತಮಾನಗಳ ಹಿಂದಿನದಷ್ಟೆ ಇತಿಹಾಸ ಜ್ಞಾನವಿದ್ದಿತು. ಈಗ ಅದು

---

* ಇದೇ ಬಗೆಯ ಕೆಲಸವನ್ನು ಉತ್ತರ ಕರ್ನಾಟಕದಲ್ಲಿ ಜೆ. ಎಫ್. ಫ್ಲೀಟ್ ಮಾಡುತ್ತಾ ಇದ್ದರು. ಇವರಿಗೆ ದೊರೆತ ಶಾಸನಗಳು ಸು. 200. ಇವರಿಬ್ಬರಲ್ಲಿ ಪರಸ್ಪರ ವಿಚಾರವಿನಿಮಯ ತುಂಬ ಸಲ ನಡೆಯುತ್ತಿತ್ತು. ಒಬ್ಬರ ದೋಷಗಳನ್ನು ಇನ್ನೊಬ್ಬರು ತೋರಿಸುತ್ತಿದ್ದಾಗ, ಅದು ನಿಜಕ್ಕೂ ತಪ್ಪೇ ಇದ್ದರೆ, ಇನ್ನೊಬ್ಬರು ಒಪ್ಪಿಕೊಂಡು ಬಿಡುವಷ್ಟು ಉದಾರ ಮನಸ್ಸಿನವರೂ ಪ್ರಾಮಾಣಿಕರೂ ಸ್ನೇಹಶೀಲರೂ ಆಗಿದ್ದರು.

ಕ್ರಿ. ಪೂ. 3ನೇ ಶತಮಾನದವರೆಗೂ ವಿಸ್ತರಿಸಿತು ಮತ್ತು ಅಂದಿ ನಿಂದ 19ನೇ ಶತಮಾನದವರೆಗೆ ನಮಗೆ ಏಕಪ್ರಕಾರ ವಾದ, ಹಾಗೂ ಬಹುಮಟ್ಟಿಗೆ ಸರ್ವಾಂಗೀಣವಾದ ಇತಿಹಾಸ ದೊರೆತಿದೆ.

ರೈಸರು ಕಂಡುಹಿಡಿದ, ನಮ್ಮ ನಾಡಿನ ಇತಿಹಾಸಕ್ಕೆ ಸಂಬಂಧಿಸಿದ ಅತಿ ಪ್ರಾಚೀನವಾದ ಘಟನೆಯೆಂದರೆ ಮೌರ್ಯರ ಚಂದ್ರಗುಪ್ತ ಹಾಗೂ ಭದ್ರಬಾಹು ಇವರು ಶ್ರವಣಬೆಳ್ಗೊಳಕ್ಕೆ ಬಂದು ವಾಸವಾಗಿದ್ದದ್ದು. ಅನಂತರ ಅಶೋಕನ ಕಿರುಶಾಸನಗಳು ನಮ್ಮಲ್ಲಿ ದೊರೆತದ್ದು. ಅವರು ಕಂಡುಹಿಡಿದ ಶಿಕಾರಿಪುರ ತಾಲೂಕಿನಲ್ಲಿಯ ಶಾಸನಗಳಿಂದ ಸಾತಕರ್ಣಿ ರಾಜಮನೆತನದ ಚರಿತ್ರೆಯೂ ತಾಳಗುಂದದ ಶಾಸನಗಳಿಂದ ಕದಂಬರ ಚರಿತ್ರೆಯೂ ನಮಗೆ ತಿಳಿದು ಬಂದಿದೆ. ಪಲ್ಲವರ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ವಕ್ಕಲೇರಿ ಶಾಸನವು ಹೆಸರುವಾಸಿಯಾಗಿದೆ. ಚೋಳರು ತಮಿಳುನಾಡಿ ನಲ್ಲಿ ಆಳಿದವರು; ಆದರೆ ಅವರ ಕುರಿತ ವಿಶೇಷ ಮಾಹಿತಿ ಯಿರುವ ಶಾಸನಗಳನ್ನು ರೈಸರು ಮೈಸೂರು ಪ್ರದೇಶ ದಲ್ಲಿಯೇ ಕಂಡುಹಿಡಿದಿದ್ದಾರೆ. ಹೊಯ್ಸಳರ ಮೂಲಸ್ಥಾನ ವನ್ನು ರೈಸರೇ ನಮಗೆ ತೋರಿಸಿಕೊಟ್ಟಿದ್ದಾರೆ.

ಕರ್ನಾಟಕದಲ್ಲಿ ಕದಂಬ, ಚಾಲುಕ್ಯ, ಗಂಗ, ರಾಷ್ಟ್ರಕೂಟ, ವಿಜಯನಗರ ರಾಜ್ಯ ಸಾಮ್ರಾಜ್ಯಗಳು ಆಗಿ ಹೋದು ವೆಂಬುದು ಸರಿಯೆ. ಆದರೆ ಅನೇಕಾನೇಕ ಮಾಂಡಲಿಕ ರಾಜರೂ ಆಳಿದ್ದಾರೆ. ಇಂಥವರ ಚಾರಿತ್ರಿಕ ವಿವರಗಳು ನಮಗೆ ಮೊದಲ ಬಾರಿಗೆ ತಿಳಿದುಬಂದುವು. ಮಹಾವಲಿ, ಬಾಣ, ಚೆಂಗಾಳ್ವ, ಕೊಂಗಾಳ್ವ ಮುಂತಾದ ಹತ್ತಾರು ರಾಜ ವಂಶಗಳ ಚರಿತ್ರೆಯನ್ನೂ ರೈಸರು ರೂಪಿಸಿ, ನಮ್ಮ ಇತಿಹಾಸ ಜ್ಞಾನವನ್ನು ಅವಿಚ್ಛಿನ್ನವಾಗಿ ವಿಸ್ತರಿಸಿದ್ದಾರೆ.



ರಾಷ್ಟ್ರಕೂಟ ಶಿಲಾಲೇಖ

'ಎಪಿಗ್ರಾಫಿಯಾ ಕರ್ನಾಟಿಕಾ'ದ ಸಂಪುಟಗಳಲ್ಲಿ ನಮ್ಮ ಪೂರ್ವಜರ ಬದುಕಿನ ಬಗೆಯನ್ನು ತಿಳಿಸುವ ಅಂಶಗಳಿಗಂತೂ ಲೆಕ್ಕವೇ ಇಲ್ಲ. ದೇವಸ್ಥಾನಕ್ಕೆ ದತ್ತಿಯನ್ನು ಬಿಡುವುದರ



ಹೊಯ್ಸಳ ಶಿಲಾಲೇಖ

ಮೂಲಕ ನಮ್ಮ ಜನರು ತೋರಿಸಿದ ಧರ್ಮಶ್ರದ್ಧೆ, ಊರಿನ ಹಿತಕ್ಕಾಗಿ ತರುಣರ ಪ್ರಾಣತ್ಯಾಗ, ಪತಿಯೊಂದಿಗೆ ಸತಿಯ ಸಹಗಮನ, ಸೇವಕರ, ಸೈನಿಕರ ಸ್ವಾಮಿನಿಷ್ಠೆ, ಜನರಲ್ಲಿ

ಆಗಾಗ ತಲೆದೋರುತ್ತಿದ್ದ ವ್ಯಾಜ್ಯಗಳನ್ನು ಬಗೆಹರಿಸುವ ಕ್ರಮ — ಒಂದೇ ಎರಡೇ ಇಂಥ ನೂರಾರು ವಿಷಯಗಳು, ರೈಸರ ಕೃಪೆಯಿಂದಾಗಿ ನಮಗೆ ತಿಳಿದುಬಂದಿವೆ. ಲಕ್ಷ್ಮನೆಂಬ ಅಂಗಪಡೆಯ ಮುಖ್ಯಸ್ಥನು, ತನ್ನ ಸ್ವಾಮಿಯು ಯುದ್ಧದಲ್ಲಿ ತೀರಿದೊಡನೆ, ಅನುಚರ ಸಹಿತನಾಗಿ ಪ್ರಾಣಕೊಟ್ಟ ವಿಷಯವು ಇತಿಹಾಸದ ಪುಸ್ತಕಗಳಲ್ಲಿ ಬಂದದ್ದೇ ಇದೆ.

ಕೆಲವು ಮೋಜಿನ ಸಂಗತಿಗಳನ್ನೂ ರೈಸರು ನಮಗೆ ತಿಳಿಯಪಡಿಸಿದ್ದಾರೆ. 13ನೇ ಶತಮಾನದಲ್ಲಿ ಚನ್ನರಾಯ ಪಟ್ಟಣ ನಿವಾಸಿಯಾದ ವಿಶ್ವನಾಥ ಎಂಬವನು, ಎರಡೂ ಕೈಗಳಿಂದ ಏಕಕಾಲಕ್ಕೆ ಅಷ್ಟೇ ವೇಗದಲ್ಲಿ ಬರೆಯುತ್ತಿದ್ದನಂತೆ. (ನೀವೂ ಬೇಕಾದರೆ ಒಮ್ಮೆ ಪ್ರಯತ್ನಿಸಿ ನೋಡಬಹುದು!) ನಮ್ಮ ಜನರ ಅದ್ಭುತ ನೆನಪಿನ ಶಕ್ತಿಯ ಬಗ್ಗೆಯೂ ವಿಸ್ಮಯಕಾರಕವಾದ ವರದಿಗಳಿವೆ. ಇಬ್ಬರು ಒಂದೇ ವೇಳೆಗೆ ಬೇರೆ ಬೇರೆ ಕವಿತೆಗಳನ್ನು ಹೇಳಬೇಕು. ಮೊದಲಿನಿಂದ ಅಲ್ಲ — ಕೊನೆಯ ಸಾಲಿನಿಂದ! ಅದನ್ನು ಕೇಳಿದ ಅದ್ಭುತ ನೆನಪಿನ ವ್ಯಕ್ತಿಯೊಬ್ಬನು ಎರಡೂ ಕವಿತೆಗಳನ್ನು ಪ್ರಾರಂಭದಿಂದ ಕೊನೆಯವರೆಗೆ ಇಷ್ಟೂ ತಪ್ಪದಂತೆ ಹೇಳುತ್ತಿದ್ದನಂತೆ. ಅದರಂತೆ ನಾಲ್ಕು ಜನ ಏಕಕಾಲಕ್ಕೆ ಕಥೆ ಹೇಳುವವರನ್ನು ಕೂಡ್ರಿಸಿಕೊಂಡು, ಕೇಳಿಯಾದ ಮೇಲೆ ನಾಲ್ಕೂ ಕಥೆಗಳನ್ನೂ ಈತ ಒಪ್ಪಿಸುತ್ತಿದ್ದನಂತೆ!

## ಅಯ್ಯೋ, ಕನ್ನಡದಲ್ಲೇ ಮಾತನಾಡೋಣವೇ?

ಕ್ರಿ. ಶ. 1924ನೇ ವರುಷ ಇಂಗ್ಲೆಂಡಿನಲ್ಲಿ ಕಾಮನ್ ವೆಲ್ತ್ ರಾಷ್ಟ್ರಗಳ ವಸ್ತುಪ್ರದರ್ಶನ ನೆರವೇರಿತು. ಅದರಲ್ಲಿ ಬ್ರಿಟಿಷರ ಆಧಿಪತ್ಯದಲ್ಲಿದ್ದ ಎಲ್ಲ ರಾಷ್ಟ್ರಗಳು ಭಾಗವಹಿ

ಸಿದ್ದುವು. ಹಿಂದುಸ್ತಾನದಲ್ಲಿ ಆಗ ಸಂಸ್ಥಾನಗಳು ಪ್ರತ್ಯೇಕವಾಗಿ ಇದ್ದುವಾದ್ದರಿಂದ ಅವುಗಳಿಗೂ ಒಂದೊಂದು 'ಮಳಿಗೆ'ಯನ್ನು ಕಾಯ್ದಿ ಇಡಲಾಗಿತ್ತು. ಮೈಸೂರು ಸಂಸ್ಥಾನದ ಗಂಧದ ವಸ್ತುಗಳು, ರೇಷ್ಮೆ ಬಟ್ಟೆಗಳು, ಇತರ ಕಲಾಕೃತಿಗಳು — ಇವನ್ನು ಪ್ರದರ್ಶನಕ್ಕೆಂದು ಒಯ್ಯಲಾಯಿತು. ಅಲ್ಲಿ ಅವನ್ನು ಪ್ರದರ್ಶಿಸಿ, ಬಂದ ಪ್ರೇಕ್ಷರಿಗೆಲ್ಲ ತೋರಿಸುವುದಕ್ಕೆಂದು ಎಸ್. ಜಿ. ಶಾಸ್ತ್ರಿ ಎಂಬವರು ನೇಮಕವಾಗಿದ್ದರು. ಆಗಿನ ಕಾಲದಲ್ಲಿ (1916) ಲಂಡನ್ ವಿಶ್ವವಿದ್ಯಾಲಯದ ಎಂ. ಎಸ್‌ಸಿ. ಪದವಿಯನ್ನು ಪಡೆದಿದ್ದ ಶಾಸ್ತ್ರಿಗಳು ಮೈಸೂರು ಸೋಪು ಕಾರಖಾನೆಯಲ್ಲಿ ದೊಡ್ಡ ಹುದ್ದೆಯಲ್ಲಿದ್ದರು. ಸಾಹಿತ್ಯ, ನಾಟಕಾದಿಗಳಲ್ಲಿ ತುಂಬ ಆಸ್ಥೆಯಿದ್ದ ಲೇಖಕರೂ ಹೌದು.

ಮೈಸೂರ ಮಳಿಗೆಯನ್ನು ಅವರು ಇತರರಿಗೆ ತೋರಿಸುತ್ತಿದ್ದ ಕಾಲದಲ್ಲಿ ಓರ್ವ ಹಣ್ಣು ಹಣ್ಣಾದ ಮುದುಕರು ಕೋಲನ್ನು ಊರಿಕೊಂಡು ಬಂದರು. ಸಂಜೆಯಾಗುತ್ತ ಬಂದಿತ್ತು. ಪ್ರದರ್ಶನವನ್ನು ಆ ದಿನದ ಮಟ್ಟಿಗೆ ಮುಚ್ಚುವ ಸಮಯ. ಆ ಮುದುಕ ಬಂದುದನ್ನು ಶಾಸ್ತ್ರಿಗಳು ನೋಡಿದ್ದರಾದರೂ ಗಮನ ಕೊಟ್ಟಿರಲಿಲ್ಲ. ಮುದುಕರೂ ನೋಡುವ ಚಪಲ ತೋರಿಸದೇನೆ, ಒಂದು ಕುರ್ಚಿಯ ಮೇಲೆ ಕುಳಿತಿದ್ದರು. ಇತರರ ಗದ್ದಲ ಕಡಿಮೆಯಾದ ಮೇಲೆ ಅವರು ಶಾಸ್ತ್ರಿಗಳನ್ನು ಕಂಡು :

"ಹಲೊ, ನಾನು ಲೂಯಿ ರೈಸ್" ಎಂದು ತಮ್ಮ ಪರಿಚಯ ಹೇಳಿಕೊಂಡರು.

ಶಾಸ್ತ್ರಿಗಳಿಗೆ ಆಚ್ಚರಿಯ ಪರಮಾವಧಿ ! ಇಡೀ ಮೈಸೂರಿನವರಿಗೆ ಚಿರಪರಿಚಿತರಾಗಿದ್ದ ಹೆಸರನ್ನು ಕೇಳಿದೊಡನೆ ಸಂಭ್ರಮಗೊಂಡರು.

"Good evening, sir! I am S. G. Shastri, son of Sosale Ayyashastri. My father used to mention about you, with reverence."

"ಹೀಗೋ. ಸಂತೋಷ! ಅವರು ಆರೋಗ್ಯವಾಗಿದ್ದಾರೆಯೆ?"

"Yes, sir. How are you, sir?"

"ಹೀಗಿದ್ದೇನೆ ನೋಡಿ, ನರಶಕ್ತಿ ಕುಂದಿದೆ. ಓಡಾಡೋಕ್ಕೆ ಆಗುವುದಿಲ್ಲ."

"Very kind of you, sir. You have taken the trouble of — "

"ಅಯ್ಯಾ, ಕನ್ನಡದಲ್ಲೀ ಮಾತನಾಡೋಣವೆ? ಮುದ್ದಾದ ಕನ್ನಡ ಕಿವಿಯ ಮೇಲೆ ಬೀಳದೆ ತುಂಬಾ ದಿನಗಳಾದುವು!"

ರೈಸರು ಇಂಗ್ಲಿಷ್ ಭಾಷೆಯನ್ನಾಡುತ್ತಿದ್ದ ಕನ್ನಡಿಗರೊಬ್ಬರಿಗೆ ಹೇಳಿದ ಮಾತಿದು! ಮನೆಯಲ್ಲಿಯ ತಂದೆ-ತಾಯಿ ಬಂಧು ಬಳಗದವರೊಡನೆ ಸಹ ಇಂಗ್ಲಿಷಿನಲ್ಲಿ ಮಾತನಾಡುವ ಚಪಲವನ್ನು ತೋರುವ ನಮಗೆ ಇದೊಂದು ಮಾತಿನ ಪೆಟ್ಟು ಆಗಬಹುದು. ಹೀಗಿರುವಾಗ ವಿದೇಶೀ ವಾತಾವರಣದಲ್ಲಿ, ಇಂಗ್ಲಿಷಿನಲ್ಲಿಯೇ ಸಂಭಾಷಣೆಯನ್ನು ಆರಂಭಿಸಿದ್ದುದು ಶಾಸ್ತ್ರಿಗಳ ತಪ್ಪೇನೂ ಅಲ್ಲ, ರೈಸರಾದರೂ ಅವರನ್ನು ಟೀಕಿಸುವ ದೃಷ್ಟಿಯಿಂದ ಹೇಳಲಿಲ್ಲ. ಕನ್ನಡದ ಬಗ್ಗೆ ಅವರಿಗೆ ಇದ್ದ ಕಳಕಳಿಯು ಹಾಗೆ ಅನ್ನಲು ಪ್ರೇರಿಸಿತು. ಮುಂದಿನ ಸಂಭಾಷಣೆಯಲ್ಲಿ ರೈಸರು "ಮಹಾರಾಜರು ಹೇಗಿದ್ದಾರೆ". "ನರಸಿಂಹಾಚಾರ್ಯರಿಗೆ ನನ್ನ ವಂದನೆ ತಿಳಿಸು

ವಿರ ?", "ನಮಶ್ಶಿವಾಯ ಪಿಳ್ಳೈ * ಈಗ ನಿವೃತ್ತರಾಗಿರ ಬೇಕು" ಎಂದು ತಮಗೆ ಗುರುತಿದ್ದವರ ಯೋಗಕ್ಷೇಮವನ್ನು ವಿಚಾರಿಸತೊಡಗಿದರು. ಶಾಸ್ತ್ರಿಗಳು ವಿವರಿಸುತ್ತಿದ್ದಂತೆಲ್ಲ ಲಕ್ಷ್ಯಕೊಟ್ಟು ಕೇಳುತ್ತಿದ್ದರು. ಮಧ್ಯೆ ಆಗಾಗ "ಆಹಾ! ಕನ್ನಡ ಎಷ್ಟು ಇಂಪು! ಎಷ್ಟು ಮಧುರ!" ಎಂದು ಉದ್ಗಾರ ತೆಗೆಯುತ್ತಿದ್ದರಂತೆ!

ಈ ಘಟನೆ ನಡೆದಾಗ ರೈಸರಿಗೆ 87 ವರ್ಷ. ಓಡಾಡಲು ತೊಂದರೆಯಾಗುತ್ತಿದ್ದರೂ ಹ್ಯಾರೊದಿಂದ ಹೊರಟು ಮೈಸೂರು ಮಳಿಗೆಯನ್ನು ಸಂದರ್ಶಿಸಲೆಂದು ಧಡಪಡಿಸಿ ಬಂದಿದ್ದರಲ್ಲ. ಮನೆಯಲ್ಲೇ ಇದ್ದುಕೊಂಡು, ಮೈಸೂರಿನ ತಮ್ಮ ಪರಿಚಯದವರೊಂದಿಗೆ ಪತ್ರ ವ್ಯವಹಾರ ಮಾಡುತ್ತಲೇ ಇದ್ದರು. ದಿ. 6 ಏಪ್ರಿಲ್ 1927ರಂದು ಆರ್. ನರಸಿಂಹಾಚಾರ್ಯರಿಗೆ ಬರೆದ ಪತ್ರದಲ್ಲಿ ಹೀಗೆ ಹೇಳಿದ್ದಾರೆ:

"ನನ್ನ ವಿಷಯವಾಗಿ ಇನ್ನೂ ವಿಚಾರಿಸುವವರಿಗೆಲ್ಲ ದಯೆಯಿಟ್ಟು ನನ್ನ ನೆನಪು ಕೊಡಿ. ಮೈಸೂರಲ್ಲಿ ನನಗಿರುವ ಪ್ರೀತಿಗೆ ಚ್ಯುತಿಯೇ ಇಲ್ಲ."

ಈ ಪತ್ರವನ್ನು ತಂದ ಹಡಗು ಮದ್ರಾಸಿಗೆ ಬಂದು, ಪತ್ರವು ಬೆಂಗಳೂರನ್ನು ತಲುಪುವ ವೇಳೆಗೆ, ರೈಸರು ಈ ಲೋಕವನ್ನು ಬಿಟ್ಟು ತೆರಳಿದ್ದರು (ಜುಲೈ 10, 1927). ಹೀಗಾಗಿ ಮೇಲೆ ಹೇಳಿದ ಮಾತುಗಳು ನಮ್ಮ ಪಾಲಿಗೆ ಚರಮ ಸಂದೇಶವಾಗಿ ಉಳಿದುಕೊಂಡಿವೆ. ಇನ್ನೊಂದು ವಾರ ಅವರು ಬದುಕಿ ಇದ್ದಿದ್ದರೆ, ಅವರಿಗೆ 90 ವರ್ಷ ತುಂಬುತ್ತಿತ್ತಲ್ಲವೆ.

---

* ಇವರು ರೈಸರ ಕಚೇರಿಯಲ್ಲಿ ಚಿತ್ರಕಾರರಾಗಿ ಕೆಲಸಕ್ಕಿದ್ದರು. 'ಎಪಿಗ್ರಾಫಿಯಾ ಕರ್ನಾಟಿಕಾ'ದ ಅನೇಕ ಸಂಪುಟಗಳಲ್ಲಿ ಇವರು ತೆಗೆದ ಛಾಯಾಚಿತ್ರಗಳೂ ನಕ್ಷೆಗಳೂ ಇವೆ.

ರೈಸರು ಬರೆದ ಮೈಸೂರ ಗಝೆಟಿಯರನ್ನು ಸಿ. ಹಯವದನರಾಯರೆಂಬವರು ತುಂಬ ವಿಸ್ತರಿಸಿ, ಹಲವಾರು ಸಂಪುಟಗಳಲ್ಲಿ ನಮಗೆ ಮೈಸೂರಿನ ಸಾದ್ಯಂತ ಚರಿತ್ರೆಯನ್ನು ಒದಗಿಸಿದ್ದಾರೆ. ರೈಸರು ಕೈಕೊಂಡಿದ್ದ ಹಳಗನ್ನಡ ಕವಿ, ಕೃತಿಗಳ ಅನ್ವೇಷಣೆಯನ್ನು ಮುಂದುವರಿಸಿ, ಆರ್. ನರಸಿಂಹಾಚಾರ್ಯರು 'ಕವಿಚರಿತೆ'ಯ ಮೂರು ಸಂಪುಟಗಳನ್ನು ಹೊರತಂದರಲ್ಲ! ಆಚಾರ್ಯರು ಶಾಸನಗಳ ಸಂಗ್ರಹ ಸಂಪಾದನೆಯನ್ನು ಬಹುವಾಗಿ ವಿಸ್ತರಿಸಿದರು. ಕನ್ನಡ ಇತಿಹಾಸ ಸಂಶೋಧನೆಯ ಕಾರ್ಯವನ್ನಂತೂ ವಿದ್ವಾಂಸರು, ರೈಸರ ಶೋಧಗಳನ್ನು ಆಗಾಗ ಪ್ರಸ್ತಾಪಿಸುತ್ತ ಅಖಂಡವಾಗಿ ಮುಂದುವರಿಸಿದ್ದಾರೆ. ಎಪಿಗ್ರಾಫಿಯಾ ಕರ್ನಾಟಕಾದ ಸಂಪುಟಗಳನ್ನು ಪರಿಷ್ಕರಿಸಿ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯವರು, ಒಂದೊಂದಾಗಿ ಪ್ರಕಟಿಸುತ್ತ ಇದ್ದಾರೆ. ಅವುಗಳಲ್ಲಿ ಬಂದ ಶಾಸನಗಳಲ್ಲಿಯ ಮಾಹಿತಿಯನ್ನೆಲ್ಲ ಗಣಕಯಂತ್ರಕ್ಕೆ (ಕಂಪ್ಯೂಟರ್) ಪೂರೈಸಿ, ಸಾವಿರಾರು ಶಾಸನಗಳಲ್ಲಿಯ ಯಾವುದೇ ಸಣ್ಣ ಮಾಹಿತಿ–ಬೇಕಾದರೂ, ಅದನ್ನು ಕ್ಷಣಾರ್ಧದಲ್ಲಿ ಕಂಡುಕೊಳ್ಳುವ ಯೋಜನೆ ರೂಪುಗೊಳ್ಳುತ್ತಲಿದೆ.

ಸುಪ್ರಸಿದ್ಧ ಸಾಹಿತಿಗಳಾದ ಎ. ಆರ್. ಕೃಷ್ಣಶಾಸ್ತ್ರಿಗಳ ಮಾತಿನಲ್ಲಿ ಹೇಳುವುದಾದರೆ, "ಕನ್ನಡನಾಡಿನಲ್ಲಿಯೆ ಹುಟ್ಟಿ ಬೆಳೆದು, ಅದರ ಉಪ್ಪನ್ನು ಮಣಗಟ್ಟಲೆ ತಿಂದವನೂ ಕನ್ನಡ ದೇಶಕ್ಕೆ ಇಷ್ಟು ಉಪಕಾರ ಮಾಡಿರುವುದು ಅಪರೂಪ." ಅಂಥ ರೈಸರ–ಬಿಳಿಯ ಕನ್ನಡಿಗರ ಕಾರ್ಯವನ್ನು ನಾವು ಮರೆಯುವುದೆಂತು ?



